# ಆಧುನಿಕ ಕನ್ನಡ ಕಾವ್ಯದಲ್ಲಿ 'ಮಳೆ' ಕುರಿತ ಕವನಗಳ ವಿಶ್ಲೇಷಣೆ

(ಕನ್ನಡ ವಿಶ್ವವಿದ್ಯಾಲಯ ಹಂಪಿ, ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಎಂ. ಫಿಲ್. ಪದವಿಗಾಗಿ ಸಲ್ಲಿಸಿದ ಸಂಪ್ರಬಂಧ)


ಸಂಶೋಧಕರು

ಮಂಜುನಾಥ ಜಿ. ಬಿ.

(ರಿ.ನಂ : ೧೫೦೧೦೧೦೨.೦೦೦೬)

ಮಾರ್ಗದರ್ಶಕರು

ಡಾ. ಬಿ. ಎಂ. ಪುಟ್ಟಯ್ಯ

ಪ್ರಾಧ್ಯಾಪಕರು

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ





ಭಾಷಾ ನಿಕಾಯ

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩೨೭೬

೨೦೧೫-೧೬

# ಆಧುನಿಕ ಕನ್ನಡ ಕಾವ್ಯದಲ್ಲಿ 'ಮಳೆ' ಕುರಿತ ಕವನಗಳ ವಿಶ್ಲೇಷಣೆ

(ಕನ್ನಡ ವಿಶ್ವವಿದ್ಯಾಲಯ ಹಂಪಿ, ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಎಂ. ಫಿಲ್. ಪದವಿಗಾಗಿ ಸಲ್ಲಿಸಿದ ಸಂಪ್ರಬಂಧ)



ಸಂಶೋಧಕರು

**ಮಂಜುನಾಥ.ಜಿ.ಟಿ.**

(ರಿ.ನಂ : ೧೫೦೧೦೧೦೩೦೦೦೬)

ಮಾರ್ಗದರ್ಶಕರು

**ಡಾ. ಬಿ. ಎಂ. ಪುಟ್ಟಯ್ಯ**

ಪ್ರಾಧ್ಯಾಪಕರು

ಕನ್ನಡ ಸಾಹಿತ್ಯಅಧ್ಯಯನ ವಿಭಾಗ



ಭಾಷಾ ನಿಕಾಯ

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಕನ್ನಡ ವಿಶ್ವ ವಿದ್ಯಾಲಯ, ಹಂಪಿವಿದ್ಯಾರಣ್ಯ-೫೮೩೨೭೬

೨೦೧೫-೧೬.

# ಮಾರ್ಗದರ್ಶಕರ ಪ್ರಮಾಣ ಪತ್ರ

ಮಂಜುನಾಥ. ಜಿ. ಟಿ. ಇವರು "ಆಧುನಿಕ ಕನ್ನಡ ಕಾವ್ಯದಲ್ಲಿ ಮಳೆ ಕುರಿತ ಕವನಗಳ ವಿಶ್ಲೇಷಣೆ" ಎಂಬ ಶೀರ್ಷಿಕೆಯ ಈ ಎಂ. ಫಿಲ್. ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯ ಹಂಪಿ, ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಎಂ. ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವನ್ನು ಈ ಮೊದಲು ಬೇರೆಯಾವುದೆ ವಿಶ್ವವಿದ್ಯಾಲಯದ ಯಾವುದೆ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸಿರುತ್ತೇನೆ.

ಮಾರ್ಗದರ್ಶಕರು

(ಡಾ. ಬಿ.ಎಂ.ಪುಟ್ಟಯ್ಯ)
ಪ್ರಾಧ್ಯಾಪಕರು
ಕನ್ನಡ ಸಾಹಿತ್ಯಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ ವಿದ್ಯಾರಣ್ಯ ಹಂಪಿ.

ದಿನಾಂಕ 30-07-2016
ಸ್ಥಳ : ವಿದ್ಯಾರಣ್ಯ

## ದೃಢೀಕರಣ ಪತ್ರ

"ಆಧುನಿಕ ಕನ್ನಡ ಕಾವ್ಯದಲ್ಲಿ ಮಳೆ ಕುರಿತ ಕವನಗಳ ವಿಶ್ಲೇಷಣೆ" ಎಂಬ ಶೀರ್ಷಿಕೆಯ ಈ ಎಂ.ಫಿಲ್. ಸಂಪ್ರಬಂಧವನ್ನು **ಡಾ. ಬಿ. ಎಂ. ಪುಟ್ಟಯ್ಯ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಕನ್ನಡ ವಿಶ್ವವಿದ್ಯಾಲಯ ಹಂಪಿ, ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಎಂ. ಫಿಲ್. ಪದವಿಗಾಗಿ ಸಲ್ಲಿಸಿದ ಪ್ರಸ್ತುತ ಸಂಪ್ರಬಂಧವನ್ನು ಈ ಮೊದಲು ಬೇರೆಯಾವುದೆ ವಿಶ್ವವಿದ್ಯಾಲಯದ ಯಾವುದೆ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ : 30-07-2016
ಸ್ಥಳ : ವಿದ್ಯಾರಣ್ಯ

**ಮಂಜುನಾಥ ಜಿ. ಟಿ**
ಎಂ.ಫಿಲ್.ಸಂಶೋಧನಾ ವಿದ್ಯಾರ್ಥಿ
ಕನ್ನಡ ಸಾಹಿತ್ಯಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ ವಿದ್ಯಾರಣ್ಯ ಹಂಪಿ

# ಪರಿವಿಡಿ

ಅಧ್ಯಾಯ. ೧. ಅಧ್ಯಯನದ ಉದ್ದೇಶ ಸ್ವರೂಪ ಮತ್ತು ವ್ಯಾಪ್ತಿ.

ಅಧ್ಯಾಯ. ೨. ಮಳೆ ಕುರಿತ ಕವನಗಳ ಅವಲೋಕನ.

ಅಧ್ಯಾಯ. ೩. ಮಳೆಗೆ ಸ್ವಾಗತ.

ಅಧ್ಯಾಯ. ೪. ಮಳೆಬಂದ ಪರಿಣಾಮ : ಪ್ರಕೃತಿಯ ಮೇಲೆ.

ಅಧ್ಯಾಯ. ೫. ಮಳೆಬಂದ ಪರಿಣಾಮ : ಜನರ ಮೇಲೆ.

ಅಧ್ಯಾಯ. ೬. ಮಳೆಬಂದ ಪರಿಣಾಮ : ಸಂಬಂಧಗಳ ಮೇಲೆ.

ಅಧ್ಯಾಯ. ೭. ಮಳೆಬಂದ ಪರಿಣಾಮ : ಬಡಜನರ ಮೇಲೆ.

ಅಧ್ಯಾಯ. ೮. ಮಳೆ ಬರುವಾಗಿನ ಸ್ಥಿತಿ.

ಅಧ್ಯಾಯ. ೯. ಮಳೆಯ ಚಿತ್ರಣ.

ಅಧ್ಯಾಯ. ೧೦. ಮಳೆಯ ವರ್ಣನೆ

ಅಧ್ಯಾಯ. ೧೧. ಸಮಾರೋಪ.

ಗ್ರಂಥಋಣ

## ಅಧ್ಯಾಯ– ಒಂದು

## ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

### ಪ್ರವೇಶ

ರಾಷ್ಟ್ರ ರಾಷ್ಟ್ರಗಳ ನಡುವಿನ ಯುದ್ಧಗಳು ಭಯೋತ್ಪಾದನಾ ಚಟುವಟಿಕೆಗಳು ಧಾರ್ಮಿಕ ಕಲಹಗಳಿಂದ ಏರ್ಪಡುವ ಕ್ರೌರ್ಯ, ಹಿಂಸೆಗಳು, ಜಗತ್ತಿನಾದ್ಯಂತ ಉಲ್ಬಣಗೊಳ್ಳುತ್ತಿವೆ. ಪರಿಸರ ಸಮಸ್ಯೆ ಮಿಕ್ಕೆಲ್ಲಾ ಸಮಸ್ಯೆಗಳಿಗಿಂತ ಮಾರಕವಾಗಿ ಜಾಗತಿಕ ಮಟ್ಟದಲ್ಲಿ ಜ್ವಲಂತ ಸಮಸ್ಯೆಯಾಗಿ ಪರಿಣಮಿಸಿದೆ. ಅಖಂಡ ಜೀವ ಸಂಕುಲವನ್ನು ತನ್ನ ಒಡಲಲ್ಲಿಟ್ಟುಕೊಂಡಿರುವ ಭೂಮಿಯು ದಿನೇ ದಿನೇ ಬಿಸಿಯಾಗುತ್ತಿದೆ. ಪರಿಸರ ಮಾಲಿನ್ಯದಿಂದ ಇಡೀ ಜಗತ್ತು ದುರಂತದ ಕಡೆಗೆ ಚಲಿಸುತ್ತಿದೆಯೋ ಎಂಬಂತಾಗಿದೆ.

ಜೀವ ವೈವಿಧ್ಯತೆಯ ಸುಂದರವು ಆಗರವಾಗಿರುವ ಭೂಮಿ ಅತಿಯಾದ ಜನಸಂಖ್ಯಾ ಸ್ಫೋಟದಿಂದ ತನ್ನೆಲ್ಲಾ ಚೈತನ್ಯಶಕ್ತಿ ಹಾಗೂ ಕ್ರಿಯಾಶೀಲತೆಯನ್ನು ಕಳೆದುಕೊಳ್ಳುತ್ತಿದೆ. ಹಾಗಾಗಿ ಇಡೀ ಭೂಮಂಡಲದ ಮೇಲಿನ ಭೌತಿಕ ಹಾಗೂ ಜೈವಿಕ ಜೀವ ಜಗತ್ತಿಗೆ ಅಳಿವು ಉಳಿವಿನ ಪ್ರಶ್ನೆ ಎದುರಾಗಿದೆ. ಆದ್ದರಿಂದ ಜಗತ್ತಿನಾದ್ಯಂಥ ಪರಿಸರ ಆಂದೋಲನಗಳು ಅಧ್ಯಯನಗಳು ಬಿರುಸಾಗಿ ನಡೆಯುತ್ತಿವೆ. ಇದರ ಪರಿಣಾಮವಾಗಿ ಪರಿಸರವನ್ನು ಕುರಿತು ನಿಘಂಟುಗಳು, ಪುಸ್ತಕಗಳು ಅಪಾರ ಪ್ರಮಾಣದಲ್ಲಿ ರಚನೆಗೊಂಡು ಪ್ರಕಟವಾಗುತ್ತಿವೆ. ಜೊತೆಗೆ ಪರಿಸರವನ್ನು ಕುರಿತು ಜನರಲ್ಲಿ ಜಾಗೃತಿಯನ್ನು ಉಂಟು ಮಾಡಲು ಆಯಾ ರಾಷ್ಟ್ರಗಳು ಹೊಸ ಹೊಸ ಯೋಜನೆಗಳನ್ನು ರೂಪಿಸುತ್ತಿವೆ. ವಿಶ್ವವಿದ್ಯಾಲಯಗಳ ಮಟ್ಟದಲ್ಲಿ ಗಂಭೀರ ಅಧ್ಯಯನಗಳು ನಡೆಯುತ್ತಿವೆ. ಶಾಲಾ–ಕಾಲೇಜುಗಳ ಪಠ್ಯಗಳಲ್ಲಿ ಪರಿಸರ ಕುರಿತ ಕಾಳಜಿಯನ್ನು ಮೂಡಿಸುವ ಪಾಠಗಳು ಸೇರ್ಪಡೆಗೊಳ್ಳುತ್ತಿವೆ. ಹಾಗೆಯೇ ಸಾರ್ವಜನಿಕ ಸ್ಥಳಗಳು, ಸಾರ್ವಜನಿಕ ನಿಲ್ದಾಣಗಳು, ರಸ್ತೆಗಳ ಬದಿಗಳಲ್ಲಿ ಪರಿಸರ ಜಾಗೃತಿಯನ್ನು ಕುರಿತು ಸೂಕ್ತ ಸಂದೇಶ, ಸೂಚನೆಗಳನ್ನು ನೀಡುವ ಬರಹ ಮತ್ತು ಚಿತ್ರಗಳ ರೂಪದಲ್ಲಿ ಪ್ರಕಟಿಸಿ ಜನರಲ್ಲಿ ಅರಿವನ್ನು ಮೂಡಿಸಲಾಗುತ್ತಿದೆ. ಹಾಗಾಗಿ ಪರಿಸರ ಅಧ್ಯಯನಗಳು ಮುಂಚೂಣಿಗೆ ಬರುತ್ತಿವೆ. ಬೇರೆ ಬೇರೆ ಜ್ಞಾನ ಶಾಖೆಗಳಿಗೂ ಈ ಅಧ್ಯಯನ ವಿಸ್ತರಿಸುತ್ತಿದೆ. ಸಾಹಿತ್ಯ ಮತ್ತು ಪರಿಸರ ಸಂಬಂಧಗಳನ್ನು ಕುರಿತ ಅಧ್ಯಯನವು ಇಂದು ತುಂಬಾ ಮಹತ್ವವನ್ನು ಪಡೆದುಕೊಂಡಿದೆ. ಸಾಹಿತ್ಯ ಕೃತಿಗಳಲ್ಲಿ ಚಿತ್ರಿತವಾದ ಪರಿಸರ ಚಿಂತನೆ ಮತ್ತು ಪರಿಹಾರ ಪರಿಸರ ತತ್ವವನ್ನು ಗುರುತಿಸಿಕೊಳ್ಳುವ ಪ್ರಯತ್ನಗಳು ಚುರುಕುಗೊಳ್ಳುತ್ತಿವೆ.

ಜಾಗತಿಕ ಮಟ್ಟದಲ್ಲಿ ಪರಿಸರ ಕಾಳಜಿಗಳು ಒಂದು ಅಧ್ಯಯನ ಶಿಸ್ತಾಗಿ ರೂಪುಗೊಳ್ಳುವುದಕ್ಕೂ ಮೊದಲು ಪರಿಸರ ಚಿಂತನೆಗಳು ಕನ್ನಡ ಸಾಹಿತ್ಯದ ಕೇಂದ್ರ ಆಯಾಮದ ಅಭಿವ್ಯಕ್ತಿಯ ವಸ್ತುವಾಗಿದ್ದವು. ನವೋದಯ ಮತ್ತು ಅನಂತರದ ಸಾಹಿತ್ಯವನ್ನು ಅವಲೋಕಿಸಿದಾಗ ಈ ಅಂಶಗಳು ನಮ್ಮ ಗಮನಕ್ಕೆ ಬರುತ್ತವೆ. ಆದರೆ ಪರಿಸರ ಸಮಸ್ಯೆಯು ಮುಖ್ಯ ಸಮಸ್ಯೆಯಾಗಿ ಇಂದು ಕಾಡುತ್ತಿರುವಂತೆ ಬೇರೆ ಯಾವುದೇ ಸಮಸ್ಯೆ ಕಾಡುತ್ತಿಲ್ಲ ಎಂಬುದನ್ನು ಚರಿತ್ರೆ ತಿಳಿಸುತ್ತದೆ. ಆದ್ದರಿಂದ ಪರಿಸರ ಚಿಂತನೆ ಜಗತ್ತಿನ ಅಧ್ಯಯನದ ಪ್ರಮುಖ ವಲಯವಾಗಬೇಕಾಗಿದೆ. ಅದೇ ರೀತಿ ಕರ್ನಾಟಕ ಪರಿಸರದಲ್ಲಿಯೂ ಸ್ಥಳೀಯ ಸಂವೇದನೆಗಳಿಂದ ಚಿಂತಿಸಿದ ಕವಿಗಳು ಪರಿಸರ ಮತ್ತು ಮಳೆಯ ಚಿಂತನೆಯ ಮಾದರಿಗಳ ಆಶಯಗಳನ್ನು ತಮ್ಮ ಸಾಹಿತ್ಯಗಳಲ್ಲಿ ಹೇಗೆ ಅಭಿವ್ಯಕ್ತಿಸಿದ್ದಾರೆ ಎಂಬುದನ್ನು ಶೋಧಿಸುವುದು ಈ ಅಧ್ಯಯನದ ಮುಖ್ಯ ಆಶಯವಾಗಿದೆ.

ಆಧುನಿಕ ಕನ್ನಡ ಕಾವ್ಯದ ರಚನೆ ಮಳೆಯ ಮೇಲಿನ ಪ್ರೀತಿಯಿಂದ ಬೆಸೆದುಕೊಂಡಿದೆ ಎಂಬುದು ಮೇಲ್ನೋಟಕ್ಕೆ ಕಾಣುವ ಸಂಗತಿಯಾಗಿದೆ. ಮಳೆಯು ಹೊಸಗನ್ನಡದ ಕವಿಗಳಿಗೆ ರೂಪಕ ಪ್ರತಿಮೆಗಳ ಆಗರವಾಗಿದೆ. ಮಳೆಯನ್ನು ಆಧಾರವಾಗಿಟ್ಟುಕೊಂಡು ಹೊಸಗನ್ನಡ ಕಾವ್ಯ ಸಮಕಾಲೀನ ಸ್ಥಿತಿಗಳ ಬಗ್ಗೆ ತನ್ನ

ಅಭಿಪ್ರಾಯವನ್ನು ಅಭಿವ್ಯಕ್ತಿಸಿದೆ. ಮಳೆಯ ಮೂಲಕವೇ ಅಭಿವ್ಯಕ್ತಿ ಗೊಂಡಿರುವ ಪರಿಸರ ಕಾಳಜಿಯು ಮನುಷ್ಯ ಮತ್ತು ಪರಿಸರಗಳ ಭಾವನಾತ್ಮಕ ಹಾಗೂ ಸಂಘರ್ಷದ ಸಂವಹನವಾಗಿದೆ.

ಈ ಅಧ್ಯಯನವು ಮಳೆಯನ್ನು ಕುರಿತಂತೆ ಮಳೆಯ ಪರಿಣಾಮ ಕೈಗಾರಿಕೀಕರಣ, ನಗರೀಕರಣ, ಅಭಿವೃದ್ಧಿ, ಯುದ್ಧ, ಜನಸಂಖ್ಯಾ ಸ್ಫೋಟ, ಕೃಷಿ, ಮಾನವ ಸಂಬಂಧಗಳು ಮೊದಲಾದ ವಿಷಯಗಳಿಗೆ ಸಂಬಂಧಿಸಿದಂತೆ ಕವಿಗಳು ಪ್ರತಿಕ್ರಿಯಿಸಿದ ಅಭಿವ್ಯಕ್ತಿಯನ್ನು ಪ್ರಸ್ತುತಪಡಿಸುತ್ತದೆ. ಮಳೆಯನ್ನು ಕುರಿತು ಭಿನ್ನ ಅಭಿವ್ಯಕ್ತಿ ಕ್ರಮಗಳು ಮೂಡಿಬಂದಿರುವ ಬಗೆಯನ್ನು ವಿವರಿಸುತ್ತದೆ. ಕನ್ನಡ ಕವಿಗಳು ವಸಂತ ಋತುವಿನ ನಂತರ ಬಣ್ಣಿಸಿದ್ದು ವರ್ಷ ಋತುವನ್ನು. ಮಳೆಗಾಲದಲ್ಲಿ ಬರುವ ಗುಡುಗು, ಮಿಂಚು, ಕಾಮನಬಿಲ್ಲು ಇವೆಲ್ಲಾ ಕವಿ ಕಾವ್ಯದ ರಚನೆಯ ವಸ್ತುಗಳಾಗಿವೆ. ಕಾಳಿದಾಸ ಮೋಡವನ್ನೆ ಯಕ್ಷನ ಸಂದೇಶ ವಾಹಕನಾಗಿ ಮಾಡಿದ. ಪಂಪ, ರಾಘವಾಂಕ, ಲಕ್ಷ್ಮೀಶ, ಸೋಮನಾಥ ಮೊದಲಾದ ಕವಿಗಳು ವರ್ಷಕಾಲದ ಸೊಬಗನ್ನು ತಮ್ಮ ಕಾವ್ಯಗಳಲ್ಲಿ ಬಣ್ಣಿಸಿದ್ದಾರೆ. ಕವಿ ಪು.ತಿ. ನರಸಿಂಹಾಚಾರ್ ಅವರು ಮೇಲುಕೋಟೆಯ ನರಸಿಂಹಸ್ವಾಮಿಗೆ ನೀರಿನ ಅಭಿಷೇಕ ಮಾಡಿದಾಗ ಮೇಘಗಳು ಮದ್ದಾನೆಯ ಹಿಂಡುಗಳಂತೆ ಬಂದು ಮಳೆಸುರಿದುವೆಂದು ವರ್ಣಿಸಿದ್ದಾರೆ. ನಮ್ಮ ವಿಜ್ಞಾನಿಗಳು ಕೃತಕ ಮಳೆ ಸೃಷ್ಟಿಸುವಲ್ಲಿ ಹಿಂದೆಬಿದ್ದಿಲ್ಲ. ಒಟ್ಟಾರೆ ಕಷ್ಟಗಳನ್ನು ಕಳೆದು ನಮ್ಮ ಬದುಕಿನ ಬವಣೆ ನೀಗಿಸುವುದು ಮಳೆಯೆ.

## ಅಧ್ಯಯನದ ಉದ್ದೇಶ

ಮಳೆಯು ಪ್ರಕೃತಿಯ ಕೊಡುಗೆಯಾಗಿದೆ. ಇದು ಪ್ರಕೃತಿಗೆ ಅತ್ಯಂತ ಅವಶ್ಯಕವಾಗಿ ಬೇಕಾಗಿರುವಂತಹದ್ದು.. ಸಮುದ್ರದ ನೀರು ಸೂರ್ಯನ ಶಾಖದಿಂದ ಆವಿಯಾಗಿ ಮೋಡಗಟ್ಟಿ ಮತ್ತೆ ಮಳೆಯಾಗಿ ಭೂಮಿಗೆ ಸುರಿಯುತ್ತದೆ. ಇದನ್ನು ಜಲಚಕ್ರವೆಂದು ಕರೆಯುತ್ತಾರೆ. ಇಂತಹ ಜಲಚಕ್ರ ಪ್ರಕೃತಿಗೆ ಮಾನವನಿಗೆ ಮತ್ತು ಇತರ ಜೀವರಾಶಿಗಳಿಗೆ ಅತ್ಯಾವಶ್ಯಕ. ಮಳೆಯ ನೀರನ್ನು ಮನುಷ್ಯನು ಕುಡಿಯಲು ಉಪಯೋಗಿಸುತ್ತಾನೆ. ಮಳೆ ಅನ್ನವನ್ನು ಕೊಡುತ್ತದೆ. ಹಾಗಾಗಿ ಮಾನವನ ಜೀವನದಲ್ಲಿ ಮಳೆ ಅತ್ಯಂತ ಪ್ರಮುಖ ಪಾತ್ರ ವಹಿಸುತ್ತದೆ. ಒಟ್ಟಾರೆ ಮಳೆಯು ಮಾನವನ ಸಂಸ್ಕೃತಿಯ ನಿರ್ಮಾಣದಲ್ಲಿ ಪ್ರಮುಖ ಪಾತ್ರವಹಿಸುತ್ತದೆ.

ಮಳೆಯನ್ನು ಕುರಿತ ಚಿಂತನೆ ವಿಜ್ಞಾನ ಮತ್ತು ಸಾಹಿತ್ಯಗಳಲ್ಲಿ ಭಿನ್ನವಾಗಿ ನೋಡಿರುವುದನ್ನು ನಾವು ಕಾಣಬಹುದು. ಸಾಹಿತ್ಯದಲ್ಲಿ ಆರಂಭದಿಂದಲೂ ಮಳೆಯನ್ನು ಬಹಳ ಗೌರವದಿಂದ ಕಂಡಿದ್ದಾರೆ. ಮಳೆಯನ್ನು ವರುಣ ದೇವನೆಂದು ದೈವೀಕರಿಸಿದ್ದಾರೆ. ಮಳೆಯನ್ನು ಕನ್ನಡ ಕಾವ್ಯದ ಆರಂಭದ ಘಟ್ಟದಿಂದಲೂ ವಿಶೇಷ ಗೌರವದಿಂದ ಕಂಡಿದ್ದಾರೆ. ಇಂತಹ ಮಳೆಯನ್ನು ಕುರಿತು ಆಧುನಿಕ ಕನ್ನಡ ಕಾವ್ಯದಲ್ಲಿ ವಿಶೇಷ ರೀತಿಯ ಅಭಿವ್ಯಕ್ತಿಗಳು ಮೂಡಿಬಂದಿವೆ. ಹೀಗೆ ಭಿನ್ನವಾಗಿ ಅಭಿವ್ಯಕ್ತಗೊಂಡ ಕವನಗಳನ್ನು ಕೇಂದ್ರವಾಗಿಟ್ಟುಕೊಂಡು ಕವಿಗಳು ಯಾವ ರೀತಿಯ ಅಭಿಪ್ರಾಯಗಳನ್ನು ಅಭಿವ್ಯಕ್ತಿಪಡಿಸಿದ್ದಾರೆ ಎಂಬುದನ್ನು ಅವರ ಕವನಗಳ ವಿಶ್ಲೇಷಣೆ ಮಾಡುವುದರ ಮೂಲಕ ಅಧ್ಯಯನ ಮಾಡುವುದು ಈ ಅಧ್ಯಯನದ ಉದ್ದೇಶವಾಗಿದೆ.

## ಅಧ್ಯಯನದ ಸ್ವರೂಪ

'ಆಧುನಿಕ ಕನ್ನಡ ಕಾವ್ಯದಲ್ಲಿ 'ಮಳೆ' ಕುರಿತ ಕವನಗಳ ವಿಶ್ಲೇಷಣೆ' ಎಂಬ ಶೀರ್ಷಿಕೆಯ ಈ ಸಂಪ್ರಬಂಧದಲ್ಲಿ ಒಟ್ಟು ಹನ್ನೊಂದು ಅಧ್ಯಾಯಗಳಿವೆ. ಆಧುನಿಕ ಕನ್ನಡ ಸಾಹಿತ್ಯದ ಆರಂಭದಿಂದ ಇಂದಿನವರೆಗೂ ಮಳೆಯನ್ನು ಕುರಿತು ವಿಭಿನ್ನ ರೀತಿಯ ಸಾಹಿತ್ಯ ರಚನೆಯಾಗಿದೆ. ಮಳೆಯು ಎಲ್ಲಾ ಕವಿಗಳ

ಮನಸ್ಸನ್ನು ಸೆಳೆದಿದೆ. ಅದೇ ರೀತಿಯಲ್ಲಿ ಅಭಿವ್ಯಕ್ತಿಯ ರೂಪವನ್ನು ಪಡೆದಿದೆ. ಆಧುನಿಕ ಕನ್ನಡ ಕಾವ್ಯದಲ್ಲಿನ ಮಳೆಯನ್ನು ಕುರಿತ ಕವನಗಳನ್ನು ಕೇಂದ್ರವಾಗಿಟ್ಟುಕೊಂಡು ಅಧ್ಯಯನಕ್ಕೆ ಅನುಕೂಲವಾಗುವಂತೆ ಕವನಗಳ ವಿಶ್ಲೇಷಣೆಯ ಮೂಲಕ ಮಳೆಯು ಕವಿಗಳನ್ನು ಹೇಗೆ ಪ್ರಭಾವಿಸಿದೆ ಮತ್ತು ಮಳೆಯನ್ನು ಕುರಿತಂತೆ ಕವಿಗಳ ಪ್ರತಿಕ್ರಿಯೆ ಏನು ಎಂಬುದನ್ನು ಕುರಿತು ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಅಧ್ಯಾಯ ಒಂದರಲ್ಲಿ ಅಧ್ಯಯನದ ಉದ್ದೇಶ ಸ್ವರೂಪ ಮತ್ತು ವ್ಯಾಪ್ತಿಯನ್ನು ಕುರಿತು ವಿವರಿಸಲಾಗಿದೆ. ಅಧ್ಯಾಯ ಎರಡರಲ್ಲಿ ಆಧುನಿಕ ಕನ್ನಡ ಸಾಹಿತ್ಯದ ಸ್ವರೂಪದ ಹಿನ್ನೆಲೆಯಲ್ಲಿ ಮಳೆಯನ್ನು ಕುರಿತ ಗ್ರಹಿಕೆಯನ್ನು ಚರ್ಚಿಸಲಾಗಿದೆ. ಅಧ್ಯಾಯ ಮೂರರಲ್ಲಿ ಕವನಗಳ ವಿಶ್ಲೇಷಣೆಯೊಂದಿಗೆ ಮಳೆಯನ್ನು ಸ್ವಾಗತಿಸಿದ ಬಗೆಯನ್ನು ವಿವರಿಸಲಾಗಿದೆ. ಅಧ್ಯಾಯ ನಾಲ್ಕರಲ್ಲಿ ಮಳೆಯು ಪ್ರಕೃತಿಯ ಮೇಲೆ ಬೀರಿದ ಪರಿಣಾಮವನ್ನು ಕುರಿತಂತೆ ಮಳೆಯನ್ನು ಕುರಿತ ಕವನಗಳ ವಿಶ್ಲೇಷಣೆಯೊಂದಿಗೆ ವಿವರಿಸಲಾಗಿದೆ. ಅಧ್ಯಾಯ ಐದರಲ್ಲಿ ಮಳೆ ಬಂದ ಪರಿಣಾಮ: ಜನರ ಮೇಲೆ ಎಂಬ ಶೀರ್ಷಿಕೆಯಲ್ಲಿ ಜೀವಸಂಕುಲಕ್ಕೆಲ್ಲ ದಾರಿಯಾದಂತಹ ಮಳೆ ಹೇಗೆ ಮನುಷ್ಯನ ಜೀವನದ ಮೇಲೆ ಪರಿಣಾಮ ಬೀರುತ್ತದೆ ಎಂಬುದನ್ನು ಕವನಗಳ ವಿಶ್ಲೇಷಣೆಯೊಂದಿಗೆ ವಿವರಿಸಲಾಗಿದೆ. ಅಧ್ಯಾಯ ಆರರಲ್ಲಿ ಮಳೆ ಬಂದ ಪರಿಣಾಮ : ಸಂಬಂಧಗಳ ಮೇಲೆ ಎಂಬ ಶೀರ್ಷಿಕೆಯಲ್ಲಿ ಮನುಷ್ಯ ಸಂಬಂಧಗಳು ಹಾಗೂ ಮನುಷ್ಯ ಮತ್ತು ಪ್ರಕೃತಿಯ ಸಂಬಂಧಗಳ ಮೇಲೆ ಮಳೆ ಹೇಗೆ ಪರಿಣಾಮ ಬೀರಿದೆ ಎಂಬುದನ್ನು ವಿವರಿಸಲಾಗಿದೆ. ಅಧ್ಯಾಯ ಏಳರಲ್ಲಿ ಮಳೆ ಬಂದ ಪರಿಣಾಮ ಬಡ ಜನರ ಮೇಲೆ ಎಂಬ ಶೀರ್ಷಿಕೆಯಲ್ಲಿ ಮಳೆಯು ಬಡಜನರ ಮೇಲೆ ಬೀರಿದ ಪರಿಣಾಮವನ್ನು ಕುರಿತು ವಿವರಿಸಲಾಗಿದೆ. ಅಧ್ಯಾಯ ಎಂಟರಲ್ಲಿ ಮಳೆ ಬರುವಾಗಿನ ಸ್ಥಿತಿ ಹೇಗಿರುತ್ತದೆಂಬುದನ್ನು ವಿವರಿಸಲಾಗಿದೆ. ಅಧ್ಯಾಯ ಒಂಬತ್ತರಲ್ಲಿ ಮಳೆಯ ಚಿತ್ರಣವನ್ನು ಕವನಗಳ ವಿಶ್ಲೇಷಣೆಯೊಂದಿಗೆ ವಿವರಿಸಲಾಗಿದೆ. ಅಧ್ಯಾಯ ಹತ್ತರಲ್ಲಿ ಮಳೆಯ ವರ್ಣನೆಯನ್ನು ಕವನಗಳ ವಿಶ್ಲೇಷಣೆಯೊಂದಿಗೆ ವಿವರಿಸಲಾಗಿದೆ. ಅಧ್ಯಾಯ ಹನ್ನೊಂದರಲ್ಲಿ ಮೇಲಿನ ಹತ್ತು ಅಧ್ಯಾಯಗಳಲ್ಲಿ ತಿಳಿದು ಬರುವ ಅಂಶಗಳನ್ನು ಮತ್ತು ಅಧ್ಯಯನದ ಮೂಲ ಉದ್ದೇಶಗಳ ಸಫಲತೆಯನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ಈ ಪ್ರಬಂಧದ ಕೊನೆಯಲ್ಲಿ ಗ್ರಂಥಋಣದಲ್ಲಿ ಪ್ರಬಂಧಕ್ಕೆ ಮೂಲ ಆಕರ ಮತ್ತು ಪೂರಕ ಆಕರವಾಗಿ ಬಳಸಿಕೊಂಡಂತಹ ಕೃತಿಗಳ ಪಟ್ಟಿಯನ್ನು ನೀಡಲಾಗಿದೆ.

## ವ್ಯಾಪ್ತಿ

ಈ ಅಧ್ಯಯನ ವಿಷಯಕ್ಕೆ ಸಂಬಂಧಿಸಿದಂತೆ ಇಪ್ಪತ್ತನೆಯ ಶತಮಾನದ ಆಧುನಿಕ ಕನ್ನಡ ಕಾವ್ಯವನ್ನು ಅಧ್ಯಯನಕ್ಕೆ ಒಳಪಡಿಸುವುದು ಪ್ರಸ್ತುತ ಪ್ರಬಂಧದ ಉದ್ದೇಶವಾಗಿದೆ. ಇಡೀ ಆಧುನಿಕ ಕನ್ನಡ ಕಾವ್ಯವನ್ನು ಅಧ್ಯಯನಕ್ಕೆ ಒಳಪಡಿಸುವುದು ಹೆಚ್ಚು ವ್ಯಾಪ್ತಿಗೆ ಕಾರಣವಾಗುತ್ತದೆ. ಆದ್ದರಿಂದ ಪ್ರಾತಿನಿಧಿಕ ಕವನಗಳನ್ನಿಟ್ಟುಕೊಂಡು ಚರ್ಚಿಸಲು ಪ್ರಯತ್ನಿಸಲಾಗಿದೆ. ಅಂದರೆ ನವೋದಯದ ಕೆಲ ಪ್ರಾತಿನಿಧಿಕ ಕವನಗಳು ನವ್ಯ ಸಾಹಿತ್ಯದ ಪ್ರಾತಿನಿಕ ಕವನಗಳು ಹಾಗೂ ದಲಿತ ಬಂಡಾಯದ ಕೆಲವು ಮುಖ್ಯ ಲೇಖಕರನ್ನು ಒಳಗೊಂಡು ಅನುವಾದಿತ ಕವನಗಳನ್ನು ಅನುಲಕ್ಷಿಸಲಾಗಿದೆ. ಇತ್ತೀಚಿನ ಕೆಲ ಕವನಗಳನ್ನು ಅನುಲಕ್ಷಿಸಲಾಗಿದೆ. ಪ್ರಾತಿನಿಧಿಕ ಕವಿಗಳ ಆಯ್ಕೆಯು ನವೋದಯ, ನವ್ಯ, ದಲಿತ–ಬಂಡಾಯ ಘಟ್ಟಗಳನ್ನು ಮಾತ್ರವಲ್ಲದೆ ವಿಭಿನ್ನ ತಲೆಮಾರುಗಳ ವಿಭಿನ್ನ ಸಾಮಾಜಿಕ, ಧಾರ್ಮಿಕ ಹಾಗೂ ಮುಖ್ಯವಾಗಿ ಜೆಂಡರ್ ನೆಲೆಗಳನ್ನು ಹೊಂದಿದ ಕವನಗಳ ವಿಶ್ಲೇಷಣೆಗೆ ಪ್ರಯತ್ನಿಸಲಾಗಿದೆ. ಒಟ್ಟಾರೆಯಾಗಿ ಆಧುನಿಕ ಕನ್ನಡ ಕವನಗಳನ್ನು ಈ ಅಧ್ಯಯನ ವ್ಯಾಪ್ತಿಗೆ ಬಳಸಿಕೊಳ್ಳಲಾಗಿದೆ.

## ಅಧ್ಯಾಯ- ಎರಡು
## ಮಳೆ ಕುರಿತ ಕವನಗಳ ಅವಲೋಕನ

ಹೊಸಗನ್ನಡ ಕಾವ್ಯವು ಅನುವಾದದಿಂದ ಆರಂಭಗೊಂಡರೂ ಕಾವ್ಯ ಮತ್ತು ಸಣ್ಣಕಥೆಗಳ ಕ್ಷೇತ್ರದಲ್ಲಿ ಹೊಸ ರೀತಿಯಲ್ಲಿ ಸಾಹಿತ್ಯ ರಚನೆಯಾಯಿತು. ಹೊಸಗನ್ನಡ ಸಾಹಿತ್ಯವನ್ನು ಸ್ಥೂಲವಾಗಿ ಅದರ ಸ್ವರೂಪ ಮತ್ತು ರಚನೆಯ ಹಿನ್ನೆಲೆಯಲ್ಲಿ ನವೋದಯ ಸಾಹಿತ್ಯ, ಪ್ರಗತಿಶೀಲ ಸಾಹಿತ್ಯ, ನವ್ಯ ಸಾಹಿತ್ಯ ಹಾಗೂ ಬಂಡಾಯ ಮತ್ತು ದಲಿತ ಸಾಹಿತ್ಯವೆಂದು ಗುರುತಿಸಲಾಗಿದೆ.

೧೯೨೧ರಲ್ಲಿ ಬಿ.ಎಂ. ಶ್ರೀಕಂಠಯ್ಯನವರ 'ಇಂಗ್ಲೀಷ್ ಗೀತ'ಗಳು ಪ್ರಕಟವಾಯಿತು. ಇದು ಅನುವಾದ ಮತ್ತು ಕನ್ನಡ ಕಾವ್ಯಕ್ಕೆ ಒಂದು ಹೊಸ ಮಾರ್ಗವನ್ನು ತೋರಿಸಿತು. ಇಂಗ್ಲೀಷ್‌ನಿಂದ ಪ್ರಭಾವಿತವಾದ ಸಾಹಿತ್ಯದ ರೂಪಗಳಲ್ಲಿ ಮುಖ್ಯವಾದದ್ದು ಭಾವಗೀತೆ. ವ್ಯಕ್ತಿಯ ಭಾವಗಳಿಗೆ ಅಭಿವ್ಯಕ್ತಿಯನ್ನು ಕೊಡುವ ಕವನ ಭಾವಗೀತೆ, ಅಷ್ಟಪದಿ, ಪ್ರಗಾಥ, ಶೋಕಗೀತೆ ಇವೆಲ್ಲ ಭಾವಗೀತೆಯ ಒಳಪ್ರಕಾರಗಳು. ಷೇಕ್ಸ್‌ಪಿಯರ್, ಸ್ಪೆನ್ಸರ್, ಬರ್ನ್ಸ್‌ಬ್ಲೇಕ್, ವರ್ಡ್ಸ್‌ವರ್ತ್, ಷೆಲ್ಲಿ, ಬೈರನ್, ಕೀಟ್ಸ್, ಟೆನಿಸನ್‌ರಂತಹ ಕವಿಗಳು ಹೊಸಗನ್ನಡ ಕಾವ್ಯದ ರಚನೆಯ ಮೇಲೆ ಪ್ರಭಾವವನ್ನು ಬೀರಿದರು.

ಶ್ರೀಸಾಮಾನ್ಯನ ಕನಸು, ಹಂಬಲ, ನಿರಾಸೆ, ಪ್ರಕೃತಿ, ಪ್ರೇಮ, ಸ್ನೇಹ, ದ್ವೇಷ, ಬೆರಗು-ಬೇಸರ ಈ ಎಲ್ಲವೂ ಕಾವ್ಯದ ವಸ್ತುವಾಗಿದ್ದನ್ನು ಕಂಡಂತಹ ಕನ್ನಡದ ಕವಿಗಳು ಭಾವಗೀತೆಗೆ ಸಹಜವಾಗಿಯೇ ಒಲಿದರು. ಭಾವಗೀತೆಗಳು ಛಂದಸ್ಸಿನ ರಚನೆಗೆ ವೈವಿಧ್ಯತೆ ತಂದು ಕೊಟ್ಟವು. ಕಾವ್ಯ ಭಾಷೆಯ ಸ್ಥಾನದಲ್ಲಿ ಆಡುಭಾಷೆ ಬಂದಿತು. ಪ್ರಾಸ ಮಹತ್ವವನ್ನು ಕಳೆದುಕೊಂಡಿತು. ಈ ರೀತಿಯ ಸಾಹಿತ್ಯದ ರಚನೆಯಲ್ಲಾದ ಬದಲಾವಣೆಯನ್ನು ಕುರಿತು ಎಲ್. ಎಸ್. ಶೇಷಗಿರಿರಾವ್ ಅವರು "ಸಿದ್ಧವಾದ ಮನೋಧರ್ಮದಿಂದ ಸಿದ್ಧವಾದ ಹಲವು ಅಚ್ಚುಗಳಲ್ಲಿ ಒಂದನ್ನು ಆರಿಸಿಕೊಂಡು ಎರಕ ಹೊಯ್ಯುವ ಕವಿ ಕ್ರಮದ ಸ್ಥಾನದಲ್ಲಿ ಯಾವ ಮನಸ್ಥಿತಿಗಾದರೂ ಯಾವ ರೀತಿಯಲ್ಲಾದರೂ ಅಭಿವ್ಯಕ್ತಿ ಕೊಡುವ ಪ್ರಜ್ಞೆ ಸೃಷ್ಟಿ ಪ್ರಾರಂಭವಾಯಿತು"[೧] ಎಂದು ಹೇಳಿದ್ದಾರೆ. ಅಂದರೆ ವಸ್ತು ರಚನೆ ಮತ್ತು ಆಶಯಗಳಲ್ಲಿ ಸಾಕಷ್ಟು ಬದಲಾವಣೆ ಆಯಿತು.

ಹೊಸಗನ್ನಡ ಕಾವ್ಯದ ವಸ್ತುಗಳಾಗಿ ನಿಸರ್ಗದ ಚೆಲುವು ಗಂಡು-ಹೆಣ್ಣುಗಳ ಪ್ರೀತಿ, ಅನುರಾಗ, ಪ್ರಣಯ, ದೇಶಪ್ರೇಮ, ಕಲೆ ಸಮಕಾಲೀನ ಜೀವನದ ಸಮಸ್ಯೆಗಳು, ಕೌಟುಂಬಿಕ ಜೀವನದ ಸುಖ-ದುಃಖಗಳು ಕ್ರಾಂತಿ ಮತ್ತು ಸ್ವಾತಂತ್ರ್ಯ ಹೋರಾಟ, ಜಾನಪದ ಹಾಗೂ ತಾತ್ವಿಕ ವಿಚಾರಗಳು ಕಾವ್ಯದ ವಸ್ತುಗಳಾದವು. ಜೊತೆಗೆ ಕಾವ್ಯದ ರಚನೆಗೆ ಪ್ರೇರಣೆಯಾದವು. ಜೀವನದ ಒಂದು ರಸ ನಿಮಿಷ, ಪ್ರಕೃತಿಯ ಒಂದು ರಮ್ಯ ವಿವರ, ದುರ್ದಮ್ಯವಾಗಿ ಉಕ್ಕಿ ಬರುವ ಒಂದು ಭಾವನೆ ಅಪೂರ್ವವಾಗಿ ಹುಟ್ಟಿದ ಒಂದು ವಿಚಾರ ಮನುಷ್ಯ ಜೀವನದಲ್ಲಿ ಒಂದು ಸಣ್ಣ ಘಟನೆ ಇವೇ ಕೇಂದ್ರ ಬಿಂದುವಾಗಿ ತಮಗೆ ಅನುಕೂಲವಾದ ಕಾವ್ಯ ಛಂದಸ್ಸು ಭಾಷೆ ಅಲಂಕಾರ ಹೊಸತನವನ್ನು ತಂದುಕೊಟ್ಟಿತು. ಮತ್ತು ವೈವಿಧ್ಯಮಯ ಸಾಹಿತ್ಯ ರಚನೆ ಸಾಧ್ಯವಾಯಿತು. ಇದಕ್ಕೆ ವಸ್ತುವಿನ ಆಯ್ಕೆಯು ಸಹ ಕಾರಣವಾಗಿದೆ. ಆದರೆ ಒಂದು ಕವಿತೆಯಂತೆ ಇನ್ನೊಂದು ಕವಿತೆ ಇಲ್ಲದಿರುವುದನ್ನು ಕಾಣಬಹುದು. ವಸ್ತುವಿಗೆ ಸಂಬಂಧಿಸಿದಂತೆ ಅವುಗಳೆಲ್ಲವೂ ವೈವಿಧ್ಯ ವಿಸ್ಮಯ ಜನಕವಾಗಿವೆ. ಇಂದ್ರಿಯ ಅನುಭವದೊಡನೆ ಅತೀಂದ್ರಿಯ ಅರಿವು ಇರುವುದನ್ನು ನೋಡಬಹುದು. ಹೊಸಗನ್ನಡ ಕವಿಗಳ ಮೇಲೆ ಪ್ರಕೃತಿಯ ಪ್ರಭಾವ ಹೆಚ್ಚು. ಪ್ರಕೃತಿಯ ಸಾನಿಧ್ಯ ಅವರಿಗೆ ಯಾವಾಗಲೂ ಕಾವ್ಯ ಸ್ಫೂರ್ತಿಯನ್ನು ಕೊಟ್ಟಿದೆ. ನಿಸರ್ಗದ ಚೆಲುವನ್ನು ಅವರು ಅನೇಕ ಕಾರಣಗಳಿಗಾಗಿ ಪ್ರೀತಿಸುತ್ತಾರೆ. ನಿಸರ್ಗದ ಆವರಣದಲ್ಲಿ ಸಾಮಾಜಿಕ ವಿಷಮತೆ ಕಾಣದಿರುವುದು ಅದಕ್ಕೆ ಕಾರಣವಾಗಿದೆ.

ಆರಂಭದ ಕನ್ನಡ ಕವಿಗಳು ಚಾರಿತ್ರಿಕ ಪ್ರಜ್ಞೆಯನ್ನು ಕಾವ್ಯಕ್ಕೆ ತಂದುಕೊಟ್ಟರು. ಸಮಕಾಲೀನ ವರ್ತಮಾನವನ್ನು ಭೂತದ ಚೌಕಟ್ಟಿನಲ್ಲಿಟ್ಟು ನೋಡಿದರು. ಭಾವಗೀತೆಗಳಿಗೆ ಗೇಯತೆಯನ್ನು ತಂದುಕೊಟ್ಟರು.

ಶಾಂತಕವಿಗಳು, ಪಂಜೆ ಮಂಗೇಶರಾಯರು, ಬಿ.ಎಂ. ಶ್ರೀಕಂಠಯ್ಯ ಮೊದಲಾದವರು ತಮ್ಮ ಭಾವಗೀತೆಗಳಲ್ಲಿ ಲಯದ ವೈವಿಧ್ಯತೆಯನ್ನು ತಂದರು. ಮಾಸ್ತಿ ವೆಂಕಟೇಶ ಐಯ್ಯಂಗಾರ್, ಡಿ. ವಿ. ಗುಂಡಪ್ಪ ಮೊದಲಾದವರ ಕಾವ್ಯದಲ್ಲಿ ಸಮರ್ಪಣಾಭಾವ ಅಥವಾ ನಿವೇದನೆಯನ್ನು ಕಾಣಬಹುದು. ಹಾಗೂ ಹಿಂದಿನ ಕವಿಗಳನ್ನು ನೆನಪಿಗೆ ತರುವಂತಹ ಕಾವ್ಯ ರಚನೆ ಮಾಡಿದರು. ಕುವೆಂಪು, ದ.ರಾ. ಬೇಂದ್ರೆ, ತೀ. ನಂ. ಶ್ರೀಕಂಠಯ್ಯ, ಕೆ. ಎಸ್. ನರಸಿಂಹಸ್ವಾಮಿ ಮೊದಲಾದವರು ವೈವಿಧ್ಯಮಯ ಅಥವಾ ವಿಭಿನ್ನ ರೀತಿಯಲ್ಲಿ ಕಾವ್ಯವನ್ನು ರಚನೆ ಮಾಡಿದರು. ಈ ಕುರಿತಂತೆ ಕೆ. ಡಿ. ಕುರ್ತುಕೋಟಿಯವರು "ಯಾವ ಬಿರುಕಿನಲ್ಲಿಯೂ ಚೈತನ್ಯ ಚಿಗುರೊಡೆಯುವಂತಾಯಿತು"[೨] ಎಂದಿದ್ದಾರೆ. ಹೆಣ್ಣು-ಗಂಡುಗಳ ನಡುವಿನ ಅನುರಾಗದಿಂದ ಹಿಡಿದು ಚಿಂತನೆ ಅನುಭಾವದವರೆಗೆ ನೂರಾರು ಅನುಭವಗಳನ್ನು ಕಾವ್ಯದಲ್ಲಿ ತಂದರು. ಆಶಯ, ಛಂದಸ್ಸುಗಳನ್ನು ಬೆರಗುಗೊಳಿಸುವಂತೆ ಬಳಸಿದರು. ಹೀಗೆ ವಿಭಿನ್ನ ವಸ್ತುಗಳನ್ನು ಕುರಿತಂತೆ ಕವನಗಳನ್ನು ರಚಿಸಿದರು. ಅದರಲ್ಲಿ ಮಳೆಯ ವಸ್ತುವನ್ನು ಕುರಿತಂತೆಯೂ ಸಹ ಸಾಕಷ್ಟು ಕವಿತೆಗಳು ರಚನೆಯಾಗಿವೆ. ಮಳೆಯನ್ನು ಕುರಿತಂತೆ ಡಿ. ಆರ್. ನಾಗರಾಜ್ ಅವರು "ಸುತ್ತ ಮಳೆ ಮೊರೆಯುತ್ತಲೇಯಿದೆ, ಜತೆಗೆ ಪದ್ಯಗಳಲ್ಲೂ ಮಳೆ"[೩] ಎಂದಿದ್ದಾರೆ.

ಪ್ರಗತಿಶೀಲ ಕಾಲಘಟ್ಟದಲ್ಲಿ ಕಾವ್ಯ ಅಥವಾ ಕವನಗಳು ಹೆಚ್ಚಾಗಿ ರಚನೆಯಾಗಲಿಲ್ಲ. ಕಾವ್ಯ ರಚನೆಯ ಭಾಷೆಗೆ ಮತ್ತು ಅಭಿವ್ಯಕ್ತಿಗೆ ಪ್ರಗತಿಶೀಲ ಕಾವ್ಯದ ಮನೋಧರ್ಮ ಹೊಂದಿಕೊಳ್ಳಲಾಗಲಿಲ್ಲ. ಪ್ರಗತಿಶೀಲ ಚಳುವಳಿಯ ವಾದ – ವಿವಾದದ ಕಾವನ್ನು ಹೊತ್ತ ಕಾವ್ಯ ಅಥವಾ ಕವಿತೆಗಳು ಕೆಲವು ರಚನೆಯಾದರೂ ಸಹ ಬಹಳಷ್ಟು ಕಾಲ ನಿಲ್ಲುವ ಕಾವ್ಯ ರಚನೆಯಾಗಲಿಲ್ಲವೆನಿಸುತ್ತದೆ. ಆದರೆ ಎಸ್. ಅನಂತನಾರಾಯಣ, ವಿ.ಜಿ. ಭಟ್ಟರು, ಕುವೆಂಪು, ದ. ರಾ. ಬೇಂದ್ರೆ, ರಾಜರತ್ನಂ ಮೊದಲಾದವರು ಈ ಮನೋಧರ್ಮದಲ್ಲಿ ಕಾವ್ಯ ಕೃಷಿಯನ್ನು ಕೈಗೊಂಡರು. ಒಟ್ಟಾರೆ ಪ್ರಗತಿಶೀಲ ಸಾಹಿತ್ಯದಲ್ಲಿ ಖಂಡಕಾವ್ಯ, ಮಹಾಕಾವ್ಯಗಳಲ್ಲಿ, ಕೆಲ ಕವಿತೆಗಳು ರಚನೆಯಾಗಿರುವುದನ್ನು ಕಾಣಬಹುದು.

ಸ್ವಾತಂತ್ರ್ಯದ ಹೊಂಗನಸುಗಳು ಆದರ್ಶಗಳು, ಧೋರಣೆಗಳು ಸ್ವಾತಂತ್ರ್ಯದ ನಂತರ ಹುಸಿ ಮಾತುಗಳಾಗಿ ಉಳಿದದ್ದು ಯುವ ಪೀಳಿಗೆಗೆ ದಿಗ್ಭ್ರಮೆ, ನಿರಾಶೆ ಮತ್ತು ಅಪನಂಬಿಕೆಗಳನ್ನು ಸೃಷ್ಟಿಸಿತು. ಕೈಗಾರೀಕರಣದ ಅತಿವೇಗದ ಜೀವನ ನಗರೀಕರಣದ ಮಾನವೀಯ ಸಂಪರ್ಕ ರಹಿತ ಜೀವನ ನವ್ಯ ಕಾವ್ಯ ರೂಪುಗೊಳ್ಳುವ ವೇದಿಕೆಯಾಯಿತು. ಹೆಚ್ಚು ಅಂತರ್ಮುಖಿ, ಉದ್ದೇಶ, ವ್ಯಂಗ್ಯ, ವಿಶ್ಲೇಷಣೆ, ಸೂಚ್ಯಾರ್ಥ ಅರ್ಥಸ್ತರಗಳಿಗೆ ಪ್ರಾಧಾನ್ಯತೆಯನ್ನು ನೀಡಿ ನವ್ಯ ಕಾವ್ಯ ರಚನೆಯಾಯಿತು.

ಅಡಿಗರು "ಅನ್ಯರೊರೆದುದನೆ ಬರೆದುದನೆ ನಾ ಬರೆಬರೆದು ಖಿನ್ನವಾಗಿದೆ ಮನವು"[೪] ಎಂದು ಹೇಳುತ್ತಾ ಹೊಸ ಕಾವ್ಯ ರೂಪದ ಅವಶ್ಯಕತೆಯನ್ನು ಹೇಳಿದರು. ಹಾಗೂ 'ಹಿಮಗಿರಿಯ ಕಂದರ, 'ಕೃಷ್ಣನ ಕೊಳಲು', 'ಚೆಂಡ ಮದ್ದಳೆ'ಯಂತಹ ಕವನ ಸಂಕಲನಗಳನ್ನು ಪ್ರಕಟಿಸಿ ನವ್ಯ ಕಾವ್ಯಕ್ಕೆ ಸ್ಪಷ್ಟವಾದ ಭೂಮಿಕೆಯನ್ನು ಹಾಕಿದರು'[೫].

ಮನೋಧರ್ಮದಲ್ಲಿ ನವ್ಯ ಕಾವ್ಯವು ತನ್ನ ಸುತ್ತಣ ಜಗತ್ತಿನೊಡನೆ ಭಾಂದವ್ಯವೆಲ್ಲಾ ಕಳಚಿಬಿದ್ದ ಏಕಾಂಗಿತನದ ಮನೋಧರ್ಮ ಭೂತ ವರ್ತಮಾನ ಭವಿಷತ್ತುಗಳ ಸಂಬಂಧ, ಕಾಲದ ಸ್ವರೂಪ, ಬಾಳಿನ ಅರ್ಥ, ಸಾವಿನ ನಿರಂತರ ನೆರಳು ಇವು ಕಾವ್ಯದ ಮುಖ್ಯ ಕಾಳಜಿಗಳಾಗಿದ್ದವು. ತನ್ನ ಸಂಕೀರ್ಣ ಅನುಭವಗಳನ್ನು ನೇರವಾಗಿ ಹೇಳಲು ಸಾಧ್ಯವಿಲ್ಲ. ಕವಿ ಅವುಗಳಿಗೆ ಪ್ರತಿಮೆಗಳ ಮೂಲಕ ರೂಪ ಕೊಡುತ್ತಾನೆ. ತನ್ನ ಅಭಿವ್ಯಕ್ತಿಗೆ ಅಗತ್ಯವಾದ ಚಿತ್ರ, ಪ್ರತಿಮೆ, ಶಬ್ಧಗಳನ್ನು ನಿಸ್ಸಂಕೋಚವಾಗಿ ಬಳಸುತ್ತಾರೆ. ಹೀಗೆ ಚಿತ್ರ ಪ್ರತಿಮೆಗಳಿಗೆ ಹೋಲಿಕೆಯಾಗಿ ಮಳೆಯ ವಸ್ತುವನ್ನು ಬಳಸಿ ವಿಭಿನ್ನ ರೀತಿಯ ಕಾವ್ಯ ರಚನೆಯಾಗಿರುವುದನ್ನು ನಾವು ಕಾಣಬಹುದು. ಹಾಗೂ ಸ್ವಚ್ಛಂದ ಛಂದದಲ್ಲಿ ಆದರೆ ಗಣ ಮತ್ತು ಮಾತ್ರೆಗಳ ಬಂಧವಿಲ್ಲದೇ ಪಂಕ್ತಿಯ ಭಾವ ಅಭಿವ್ಯಕ್ತಿಯ ಅಗತ್ಯತೆಗಳಿಗೆ ಹೊಂದಿಕೊಂಡು ಅದರ ಉದ್ದ ಮತ್ತು ಲಯದಿಂದ ರಚನೆಯಾಗಿದೆ.

ನವ್ಯ ಕಾವ್ಯ ವ್ಯಕ್ತಿ ವಿಶೇಷ ಅಂತರ್ಮುಖತೆ ಭಾಷಾ ಕ್ಲಿಷ್ಟತೆಯಿಂದಾಗಿ ಜನ ವಿಮುಖಿಯಾಯಿತು ಎಂಬ ಕೂಗು ಬಂಡಾಯ ಕಾವ್ಯ ಸಮರ್ಥನೆಯಾಗಿ ಮೂಡಿತು. ನವ್ಯ ಕಾವ್ಯವು ಸಮಾಜದ ಕೆಳವರ್ಗದವರ ಧ್ವನಿಯಾಗಲು ಸೋತಿದೆ ಎನ್ನುವ ಟೀಕೆ ಕೂಡಾ ಇದೆ. ಕಾವ್ಯದಲ್ಲಿ ಸಾಮಾಜಿಕ ಧೋರಣೆ ಬದ್ಧತೆಗಳನ್ನು ಬಯಸುವ ಕಾವ್ಯ ಮಾರ್ಗ ಸೃಷ್ಟಿಯಾಗಬೇಕೆಂಬ ಆಶಯವನ್ನು ಹೊತ್ತು ಬಂಡಾಯ ಕಾವ್ಯ 'ಲೇಖನಿಯನ್ನು ಖಡ್ಗವನ್ನಾಗಿಸುವ' ಪ್ರಣಾಳಿಕೆಯನ್ನು ಮುಂದಿಟ್ಟುಕೊಂಡಿತು. ದಲಿತ ಕವಿ ಸಿದ್ಧಲಿಂಗಯ್ಯನವರ "ಹೊಲೆ ಮಾದಿಗರ ಹಾಡು" ದಲಿತರ ಆಕ್ರೋಶ ಸಿಟ್ಟುಗಳನ್ನು ಸಮರ್ಥವಾಗಿ ಕಾವ್ಯವನ್ನಾಗಿಸಿತು. ಕಾವ್ಯದ ಕಸುಬು ಸಾಮಾಜಿಕ ಹೋರಾಟದ ಭಾಗವಾಗಿಯೇ ಇರಬೇಕಾದ ಅನಿವಾರ್ಯತೆ ದಲಿತ ಬಂಡಾಯ ಕಾವ್ಯದ ತಾತ್ವಿಕ ಸಮರ್ಥನೆಯಾಗಿದೆ. ದಲಿತರ ಬದುಕನ್ನು ದಲಿತ ಸಂಪ್ರದಾಯದ ನೋವು ನಲಿವುಗಳ ಹಿನ್ನೆಲೆಯಲ್ಲಿ ದಲಿತ ಕೇರಿಯ ಭಾಷೆಯಲ್ಲಿಯೇ ಅರ್ಥೈಸುವ ಬಲವನ್ನು, ಒಲವನ್ನು ದಲಿತ ಬಂಡಾಯ ಕಾವ್ಯ ತೋರಿಸುವತ್ತ ಹೆಜ್ಜೆ ಇಟ್ಟಿತು.

ಮಳೆಯು ಜೀವಸಂಕುಲದ ಉಳಿವಿಗೆ ಅವಶ್ಯಕವಾಗಿದೆ. ಮಳೆಯ ಉತ್ಪತ್ತಿಯು ಸೂರ್ಯನ ಶಾಖದಿಂದ ಸಮುದ್ರ ಮಹಾಸಾಗರಗಳ ನೀರು ಆವಿಯಾಗಿ ಅಲ್ಲಿ ಮೋಡಗಳ ರೂಪದಲ್ಲಿ ಸಂಗ್ರಹವಾಗುತ್ತದೆ. ಮೋಡಗಳ ಸಾಂದ್ರತೆ ಹೆಚ್ಚಾಗಿ ಮತ್ತು ಅಲ್ಲಿನ ವಾತಾವರಣ ತಂಪಾದಾಗ ಮೋಡಗಳ ತೇವಾಂಶ ಹನಿಗೂಡಿ ಭೂಮಿಯನ್ನು ಸೇರುತ್ತದೆ. ನೆಲದ ಮೇಲೆ ಬಿದ್ದ ನೀರು ಹಳ್ಳ ನದಿಗಳ ಮೂಲಕ ಮತ್ತೆ ಸಮುದ್ರ ಸಾಗರವನ್ನು ಸೇರುತ್ತದೆ. ಈ ಚಕ್ರ ಮತ್ತೆ ಮುಂದುವರಿಯುತ್ತದೆ. ಇದನ್ನು ವೈಜ್ಞಾನಿಕ ಪರಿಭಾಷೆಯಲ್ಲಿ ಜಲಚಕ್ರ ಎಂದು ಕರೆಯುತ್ತಾರೆ.

ಮಳೆಯು ಪ್ರಕೃತಿಗೆ ಅವಶ್ಯಕವಾಗಿದ್ದು, ಅದು ಪ್ರಕೃತಿದತ್ತವಾಗಿದೆ. ಮಳೆ ನಿಸರ್ಗದ ಕೊಡುಗೆಯಾಗಿದೆ. ಇದು ಭೂಮಿಯ ಮೇಲಿನ ಎಲ್ಲಾ ಜೀವರಾಶಿಗಳಿಗೂ ಅವಶ್ಯಕವಾಗಿದೆ. ಭಾರತದ ಸಂದರ್ಭದಲ್ಲಿ ಒಕ್ಕಲುತನವನ್ನೇ ಅವಲಂಭಿಸಿದ ಮುಕ್ಕಾಲು ಪಾಲು ಜನರಿದ್ದಾರೆ. ಇವರೆಲ್ಲಾ ಮಳೆಯನ್ನೇ ಅವಲಂಭಿಸಿದ್ದಾರೆ. ದೇಶದಲ್ಲಿ ಬೃಹತ್ ನೀರಾವರಿ ಯೋಜನೆಗಳು ರೂಪಿತಗೊಂಡರೂ ಮುಕ್ಕಾಲು ಪಾಲು ಜನರ ಕೃಷಿಗೆ ಮಳೆಯೇ ಜೀವನಾಧಾರ. ಹೀಗೆ ಮಳೆ ಮೇಲಿನ ಅವಲಂಬನೆ ಸರ್ವ ಕಾರ್ಯಗಳ ಮೂಲವಾದ್ದರಿಂದ ಬಹುತೇಕ ನೈಸರ್ಗಿಕ ಕ್ರಿಯೆಗಳಂತೆ ಮಳೆಯು ದೈವೀಕರಣಗೊಂಡು 'ವರುಣ' ದೇವನಾಗಿದೆ. ಮಳೆಯನ್ನು ಕುರಿತು ಡಿ. ಆರ್. ನಾಗರಾಜ್ ಅವರು "ಮಳೆ ಬೇಕು ನಿಜ. ಆದರೆ, ನಗರಗಳ ಬಡವರಿಗೆ ಶಾಪ, ಮಳೆ. ಒಮ್ಮೆ ಮಳೆ ಮನಸ್ಸಿಗೆ ತುಂಬ ಪ್ರಿಯವಾದ ಲಯ ತರುತ್ತದೆ. ಇನ್ನೊಮ್ಮೆ ಅಸಾಧ್ಯ ಕೆಸರಲ್ಲಿ ಮನಸ್ಸನ್ನು ಹೂತು ಹಾಕಿ ಬಿಡುತ್ತದೆ"[1] ಎಂದಿದ್ದಾರೆ. ಮಳೆಯನ್ನು ಕುರಿತ ಪರಿಸ್ಥಿತಿ ಇಂದು ಬದಲಾಗುತ್ತಿದ್ದು ವಾಣಿಜ್ಯ ಉದ್ದಿಮೆಗಳು ಜೀವನೋಪಾಯದ ಮಾರ್ಗಗಳಾಗುತ್ತಿವೆ. ನಗರೀಕರಣದತ್ತ ಮುಖ ಮಾಡಿದ ಗ್ರಾಮೀಣ ಯುವ ಜನತೆ ಕೃಷಿಯನ್ನು ತೊರೆಯುತ್ತಿರುವುದು ಆತಂಕದ ವಿಷಯವಾಗಿದೆ.

ವರ್ಷ ಋತುವಿನಲ್ಲಿ ಮುಂಗಾರು ಮಳೆಯ ಕಾಲ ಕವಿಗಳಿಗೆ ಅತ್ಯಂತ ಪ್ರೀತಿ ಪಾತ್ರವಾದ ಕಾಲವಾಗಿದೆ. ಮಳೆಯ ಭಾವ ಭಂಗಿ ರುದ್ರ ರಮಣೀಯತೆಯನ್ನು ಕವಿಗಳು ಬಹಳ ಅಂದವಾಗಿ ವರ್ಣಿಸಿದ್ದಾರೆ. ಋತು ಮಾನಕ್ಕೆ ತಕ್ಕಂತೆ ನಿಗದಿತ ಸಮಯಕ್ಕೆ ಸರಿಯಾಗಿ ಮಳೆ ಬರದೆ ಹೋದರೆ ಅದು ದೇಶದ ಆರ್ಥಿಕತೆಯ ಮೇಲೆ ಹಾಗೂ ಸಾಮಾಜಿಕ ಜೀವನದ ಮೇಲೆ ವ್ಯತಿರಿಕ್ತ ಪರಿಣಾಮವನ್ನು ಬೀರುತ್ತದೆ. ರೈತರ ಜೀವನಾಡಿಯಾದ ಮಳೆಯ ಬರುವಿಕೆಗಾಗಿ ಕೊರವಂಜಿ, ಜೋಕುಮಾರನ ಆರಾಧನೆ, ಕತ್ತೆಯ ಮದುವೆ, ಮೆರವಣಿಗೆ, ಕಪ್ಪೆಯ ಮದುವೆ ಇತ್ಯಾದಿ ಆಚರಣೆಗಳನ್ನು ಕಾಣುತ್ತೇವೆ. ಮಳೆಯು ಸಕಲ ಜೀವ ಸಂಕುಲದ ಉಳಿವಿಗೆ ಅಗತ್ಯವಾಗಿದೆ.

ಮಳೆಯನ್ನು ಕುರಿತಂತೆ ಹೊಸಗನ್ನಡ ಕಾವ್ಯದ ಆರಂಭದ ಘಟ್ಟದಿಂದಲೂ ವಿಶಿಷ್ಟ ದೃಷ್ಟಿ ಮತ್ತು ಗೌರವ ಇರುವುದನ್ನು ಕಾಣಬಹುದಾಗಿದೆ. ಒಟ್ಟಾರೆ ಕಾವ್ಯ ಐತಿಹಾಸಿಕ ಮತ್ತು ಸಾಂಸ್ಕೃತಿಕ ಸ್ಥಿತ್ಯಂತರಗಳ ನಡುವೆ ರೂಪುಗೊಂಡು ಬೆಳೆದಿದೆ; ಬೆಳೆಯುತ್ತಿದೆ. ಕನ್ನಡ ಕಾವ್ಯದಲ್ಲಿ ಮಳೆಯನ್ನು ಕುರಿತಂತೆ ಆರಂಭದಿಂದ ಇಂದಿನವರೆಗೂ ವಿವಿಧ ರೀತಿಯ ರಚನೆಗಳಾಗಿವೆ. ಯಾವುದೇ ಕಾಲಘಟ್ಟದಲ್ಲಿ ಬರೆಯುತ್ತಿರುವ ಕವಿ ತನ್ನ ಕಾವ್ಯಕ್ಕೆ ದ್ರವ್ಯಗಳನ್ನು ಸಾಹಿತ್ಯಿಕ ಪರಂಪರೆಯಿಂದ ಪಡೆದಿರುತ್ತಾನೆ. ಹಾಗಾಗಿ ಮಳೆಯನ್ನು ಕುರಿತಂತೆ ವಿಭಿನ್ನ ರಚನೆ ಮತ್ತು ಚಿಂತನೆ ಮೂಡಿ ಬಂದಿದ್ದಲ್ಲದೆ, ಸಾಂಸ್ಕೃತಿಕ ಆಯಾಮವನ್ನು ಹೊಂದಿದೆ.

**ಕೊನೆ ಟಿಪ್ಪಣಿಗಳು**

೧. ಹೊಸಗನ್ನಡ ಸಾಹಿತ್ಯ ಚರಿತ್ರೆ : ಶೇಷಗಿರಾವ್ ಎಲ್. ಎಸ್. ಅಂಕಿತ ಪ್ರಕಾಶನ, ಬೆಂಗಳೂರು, ೨೦೦೮ ಪುಟ ಸಂಖ್ಯೆ–೧೦.

೨. ಅದೇ ಪುಸ್ತಕ– ಪುಟ ಸಂಖ್ಯೆ–೧೦೭

೩. ಸಂಸ್ಕೃತಿ ಕಥನ: ನಾಗರಾಜ್ ಡಿ. ಆರ್. ಸಂಪಾದಕ ಅಗ್ರಹಾರ ಕೃಷ್ಣಮೂರ್ತಿ, ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು, ೨೦೦೨ ಪುಟ ಸಂಖ್ಯೆ–೨೯

೪. ಹೊಸಗನ್ನಡ ಸಾಹಿತ್ಯ: ಚರಿತ್ರೆ ಶೇಷಗಿರಿರಾವ್ಎಲ್. ಎಸ್. ಅಂಕಿತ ಪ್ರಕಾಶನ, ಬೆಂಗಳೂರು, ೨೦೦೮ ಪುಟ ಸಂಖ್ಯೆ– ೧೨೮

೫. ಕನ್ನಡ ಸಾಹಿತ್ಯ ಚರಿತ್ರೆ: ಶಾಮರಾಯ ತ.ಸು : ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ ಮೈಸೂರು, ೨೦೧೦ ಪುಟ ಸಂಖ್ಯೆ– ೧೭೦

೬. ಸಂಸ್ಕೃತಿ ಕಥನ :ನಾಗರಾಜ್ ಡಿ.ಆರ್. ಸಂಪಾದಕ ಅಗ್ರಹಾರ ಕೃಷ್ಣಮೂರ್ತಿ, ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು, ೨೦೦೨ ಪುಟ ಸಂಖ್ಯೆ–೨೯

## ಅಧ್ಯಾಯ – ಮೂರು

## ಮಳೆಗೆ ಸ್ವಾಗತ

### ಪೀಠಿಕೆ

ಮುಂಗಾರು ಮಳೆ ಎಂದಾಕ್ಷಣ ಜೂನ್ ತಿಂಗಳ ಮೊದಲ ವಾರ ನೆನಪಾಗುತ್ತದೆ. ಮಳೆಯನ್ನು ಅತ್ಯಂತ ಪೂಜ್ಯ ಭಾವದಿಂದ ಭಾರತೀಯರು ಗೌರವಿಸಿಕೊಂಡು ಬಂದಿದ್ದಾರೆ. ಮಳೆಗಾಲ ಕವಿಗಳಿಗೂ ಸಹ ಅತ್ಯಂತ ಪ್ರೀತಿಗೆ ಪಾತ್ರವಾದ ಕಾಲವಾಗಿದೆ. ಕವಿಗಳು ಮಳೆಯ ಅವಶ್ಯಕತೆ, ಮಹತ್ವ ಅರಿತು ಮತ್ತು ಅಗತ್ಯತೆಗಳಿದಿಂದಾಗಿ ಅದರ ಭಾವಭಂಗಿ ರುದ್ರರಮಣಿಯತೆಯನ್ನು ತಮ್ಮ ಕವನಗಳಲ್ಲಿ ವರ್ಣಿಸಿದ್ದಾರೆ. ಮಳೆಯನ್ನು ಆಶ್ರಯಿಸಿದ ಕೃಷಿ ಪದ್ಧತಿ ಭಾರತದಲ್ಲಿದೆ. ದೇಶದಲ್ಲಿ ಬೃಹತ್ ನೀರಾವರಿ ಯೋಜನೆಗಳಿದ್ದರೂ ಸಹ ಪ್ರತಿಶತ ಎಪ್ಪತ್ತರಷ್ಟು ಜನರ ಕೃಷಿಗೆ ಇಂದಿಗೂ ಮಳೆಯೇಜೀವಾಳವಾಗಿದೆ ಮತ್ತು ಜೀವನಾಧಾರವಾಗಿದೆ.

ಮೇ ತಿಂಗಳ ಅಂತ್ಯದೊಳಗೆ ಮಳೆಯ ಸೂಚನೆಗಳು ಕಾಣದಿದ್ದರೆ ನಮ್ಮ ರೈತರು ಹಣೆಗೆ ಕೈ ಹಚ್ಚಿಕೊಂಡು ಆಕಾಶವನ್ನು ನೋಡುತ್ತಾರೆ. "ಉಣ್ಣೆಯಾಗಿ ಮಿದು ಬೆಣ್ಣೆಯಾಗಿ ಹಿಂಜಿರುವ ಅರಳೆಯಾಗಿ ನಡೆವ ಬೆಟ್ಟವಾಗಿ ಸಾಗಿರುವ ಮೋಡಪಡೆ ಏನಾದರೂ ಕಂದಾಗಿ ಕರಿಯಾಗಿ ಕರುಣೆಯ ಎರಡು ಹನಿ ಸುರಿಸಿತೆ"? ಎಂದು ಕಣವಿಯವರು ಹೇಳಿರುವಂತೆ ಕಾಯುತ್ತಿರುತ್ತಾರೆ. ಇಂತಹ ರೈತರು ಮಳೆಯನ್ನು ಮಳೆದೇವ, ಮಳೆರಾಜ, ಮಳೆರಾಯ, ಎಂದು ಕರೆಯುತ್ತಾ, ಆರಾಧಿಸುತ್ತಾರೆ.

ಮಳೆಗಾಲದ ಆರಂಭಕ್ಕೆ ಸರಿಯಾಗಿ ನಿಯಮಿತವಾಗಿ ಆರಿದ್ರ, ಮೃಗಶಿರ, ಉತ್ತರಿ, ಹತ್ತ, ಚಿತ್ತೆ ಇತ್ಯಾದಿ ಮಳೆಗಳು ಬರದೇ ಹೋದರೆ ನಮ್ಮ ಹಳ್ಳಿಗಳಲ್ಲಿ ನಡೆಯುವ ಆಚರಣೆಗಳೆ ಬೇರೆ. ದೇವರ ಉಸಿರು ಗಟ್ಟುವಂತೆ ಗುಡಿಯ ತುಂಬೆಲ್ಲಾ ನೀರು ಸುರಿಯುವುದು. ಆ ಮೂಲಕ ಶಿವನು ಮಳೆಯನ್ನು ಕಳುಹಿಸುವನೆಂಬ ನಂಬಿಕೆ ನಮ್ಮ ಜನರಲ್ಲಿದೆ. ಇದೇ ರೀತಿಯಲ್ಲಿ ಮಳೆಯನ್ನು ಸ್ವಾಗತಿಸಿ ಕಂಗೆಟ್ಟ ರೈತನ ಬೇಡಿಕೆ ಅನೇಕ ರೀತಿಯ ಆಯಾಮಗಳನ್ನು ಪಡೆದಿದೆ. ಅದು ಅನೇಕ ಆಚರಣೆಗಳಿಗೆ ಕಾರಣವಾಗಿದೆ. ಅಂತಹ ಆಚರಣೆಗಳಲ್ಲಿ ಒಂದಾದ ಕೊರವಂಜಿಯ ಹಾಡು ಈ ರೀತಿ ಇದೆ. "ಗುರ್ಜಿ ಗುರ್ಜಿ ಎಲ್ಲಾಡಿ ಬಂದೆ ಹಳ್ಳ ಕೊಳ್ಳ ಹರಿದಾಡಿ ಬಂದೆ–ಕಾರ್ ಮಳೆಯೇ ಕಪ್ಪತ್ತ ಮಳೆಯೇ ಬಾ ಬೆಗನೆ ಬಾ ಸುರಿ ಮಳೆಯೇ" ಎಂದು ಮಳೆಯನ್ನು ಕೊರವಂಜಿಯ ಆಚರಣೆ ಮೂಲಕ ಸ್ವಾಗತಿಸುತ್ತಾರೆ.

ಮಳೆಗೆ ಸ್ವಾಗತ ಬಯಸಿ ಜೋಕುಮಾರನ ಆಚರಣೆ, ಕಪ್ಪೆ ಮದುವೆ ಹಾಗೂ ಕತ್ತೆಯ ಮದುವೆ ಮತ್ತು ಮೆರವಣಿಗೆ ದೇವರಿಗೆ ಹರಿಕೆ ಹೊರುವುದು ಇತ್ಯಾದಿ ಆಚರಣೆಗಳನ್ನು ಮಾಡುತ್ತಾರೆ. ಆ ಮೂಲಕ ಮಳೆಗೆ ಸ್ವಾಗತವನ್ನು ಬಯಸುತ್ತಾರೆ. ಈ ಆಚರಣೆಗಳು ಮೂಢನಂಬಿಕೆಗಳು ಎಂದೆನಿಸಿದರೂ ಜನರ ಮನಸ್ಸಿನ ಅಭಿಲಾಷೆ ಮಹತ್ವದ್ದಾಗಿದೆ. ಇಷ್ಟೇ ಅಲ್ಲದೇ ಕರ್ನಾಟಕದ ಕರಾವಳಿಯ ಭಾಗದಲ್ಲಿ ಮಳೆಗೆ ವಿಭಿನ್ನ ರೀತಿಯಲ್ಲಿ ಸ್ವಾಗತವನ್ನು ಬಯಸುತ್ತಾರೆ. "ಮಳೆಗಾಲ ಬರುವ ಮುನ್ನವೇ ದೋಣಿಗಳಿಗಾಗಿ ಮಡಲಿನ ಮನೆಯೊಂದನ್ನು ನಿರ್ಮಿಸಿ ತಮ್ಮ ದೋಣಿಗಳನ್ನು ತಂದು ನಿಲ್ಲಿಸುತ್ತಾರೆ. ಕಾರಣ ಮಳೆಗಾಲದಲ್ಲಿ ಮೀನುಗಾರಿಕೆಗೆ ರಜೆ ಇರುವುದರಿಂದ ಸಂಬಂಧಿಕರ ಮನೆಗಳಿಗೆ ಹೋಗಲು ಇದು ಸಕಾಲ. ಮುಂದೆ ಕಡಲು ಪೂಜೆಗಾಗಿ ಚಂದವನ್ನು ಸಂಗ್ರಹಿಸುವರು ಹಾಗೂ ಮಾರಿಯಮ್ಮ ದೇವರಿಗೆ ಹೂವಿನ ಪೂಜೆ ಕರ್ಪೂರದಾರತಿ, 'ಚಿನ್ನದ ಮೀನುಗಳ ಸರ ಅರ್ಪಣೆ', ಗೋವಾದಲ್ಲಿರುವ ಕುಲಮಾಸ್ತ್ರೀ ಅಮ್ಮನವರ ದರ್ಶನ ಪಡೆಯುವ ಯಾತ್ರೆಗಳು ಆರಂಭಗೊಳ್ಳುತ್ತವೆ"[1]. ಹೀಗೆ ಇಲ್ಲಿ ಮಳೆಯನ್ನು ಸ್ವಾಗತಿಸುವ ಆಚರಣೆ ವಿಶಿಷ್ಟವಾದುದಾಗಿದೆ. ಹೀಗೆ ರೈತರು ಮಾತ್ರ ಮಳೆಗೆ ಆಹ್ವಾನಿಸಿಲ್ಲ. ಕನ್ನಡ ಕಾವ್ಯದಲ್ಲಿ ಕೃಷಿ ಮಾಡಿರುವ ಕವಿಗಳು ಸಹ ಮಳೆಗೆ ಸ್ವಾಗತವನ್ನು ಬಯಸಿದ್ದಾರೆ. ಮಳೆ ಪ್ರಕೃತಿಯಲ್ಲಿನ ಸೃಷ್ಟಿಯಲ್ಲಿಯೇ

ವಿಶೇಷವಾದುದಾಗಿದ್ದು, ಅದು ಸಾಮಾನ್ಯವಾಗಿಯೇ ಕವಿಗಳನ್ನೂ ಸಹ ಆಕರ್ಷಿಸಿತು. ಹಾಗೆಯೇ ಮಳೆಯನ್ನು ಸ್ವಾಗತ ಬಯಸಿ ಕವನಗಳನ್ನು ರಚಿಸಲು ಪ್ರೇರೇಪಿಸಿತು. ಮಳೆಯನ್ನು ಕುರಿತ ಸಾಂಸ್ಕೃತಿಕ ಅಂಶಗಳೇ ಇದಕ್ಕೆ ಮುಖ್ಯ ಕಾರಣವಾದವು. ಎಂ. ಕೆ. ಭಾಸ್ಕರರಾವ್ ಅವರು "ಮಳೆ ಎಂದರೆ ಕೇವಲ ಮಳೆ ನೀರಲ್ಲ ಅದು ಜೀವ ಜಲ, ಸೊರಗಿದ ಪ್ರಕೃತಿಯಲ್ಲಿ ಜೀವತುಂಬುವ ಸತ್ತು ಹೋಗುವ ಕ್ಷಣದ ಅಂಚಿನಲ್ಲಿರುವ ಜೀವ ಜಂತುಗಳಿಗೆ ಬದುಕು ಕೊಡುವ ಪವಾಡ"[೨] ಎಂದಿದ್ದಾರೆ. ಇಂತಹ ಮಳೆಗೆ ಅಹ್ವಾನ ಮಾಡಿದ ಕವನಗಳನ್ನು ಮುಂದಿನಂತೆ ಕಾಣಬಹುದು.

ಬಿ.ಎಸ್. ಲಕ್ಷ್ಮಣರಾವ್ ಅವರು "ಕ್ಯಾಮರ ಕಣ್ಣು" ಎಂಬ ಕವನ ಸಂಕಲನದಲ್ಲಿ ಮಳೆಯನ್ನು ಈ ಹೀಗೆ ಆಹ್ವಾನಿಸಿದ್ದಾರೆ.

"ಸುರಿಯಲಿ ತಂಪೆರೆಯಲಿ
ಜೀವನ ಪ್ರೀತಿಯ ಮಳೆ
ಹರಿಯಲಿ ಬೋರ್ಗರಿಯಲಿ
ಬತ್ತಿದೆದೆಗಳಲಿ ಹೊಳೆ
ಕೊಚ್ಚಿ ಹೋಗಲಿ ಸ್ವಾರ್ಥದುರಾಸೆ
ಸ್ವಚ್ಛವಾಗಲಿ ಇಳೆ"[೨]

ಮಳೆಯನ್ನು ಆಹ್ವಾನಿಸುತ್ತಾ ಲಕ್ಷ್ಮಣರಾವ್ ಅವರು ಸುರಿಯಲಿ ತಂಪೆರೆಯಲಿ ಜೀವನ ಪ್ರೀತಿಯ ಮಳೆ ಎಂದಿದ್ದಾರೆ. ಮಳೆಯನ್ನು ಜೀವನಕ್ಕೆ ಹೋಲಿಸಿ ಭೂಮಿಯನ್ನು ಮಳೆಯು ತಂಪು ಮಾಡುತ್ತದೆ. ಹಾಗೆಯೇ ಮನಸನ್ನು ಪ್ರೀತಿ ತಂಪು ಮಾಡುತ್ತದೆ. ಹರಿಯಲಿ ಭೋರ್ಗರಿಯಲಿ ಬತ್ತಿದೆದೆಗಳಲಿ ಎಂದರೆ ಪ್ರೀತಿ ಹರಿಯಲಿ ಅದು ಮನಸನ್ನು ತಂಪು ಮಾಡುತ್ತದೆ. ಮಳೆ ಭೂಮಿಯನ್ನು ತಂಪು ಮಾಡಿದಂತೆ. ಹರಿಯಲಿ ಭೋರ್ಗರೆಯಲಿ ಬತ್ತಿದೆದೆಗಳಲಿ ಹೊಳೆ ಎಂದರೆ ಪ್ರೀತಿ ಎಲ್ಲಾ ಕಡೆ ಹರಡಲಿ. ಇಂದು ಮನುಷ್ಯ ಮಾನವ ಸಂಬಂಧಗಳನ್ನು ಕಳೆದುಕೊಳ್ಳುತ್ತಿದ್ದಾನೆ. ಅಂತಹ ಮನುಷ್ಯನ ಎದೆಯಲಿ ಪ್ರೀತಿಯು ಹರಿಯಲಿ ಕೊಚ್ಚಿ ಹೋಗಲಿ ಸ್ವಾರ್ಥ ದುರಾಸೆ ಸ್ವಚ್ಛವಾಗಲಿ ಇಳೆ. ಪ್ರೀತಿಯಿಂದ ಮನಸ್ಸಿನ ಕಲ್ಮಶಗಳು ದೂರವಾಗಲಿ ಎಂದಿದ್ದಾರೆ. ಕವಿಯು ಮಳೆಯನ್ನು ಪ್ರೀತಿಯೊಂದಿಗೆ ಹೋಲಿಸಿ ಬರೆದಿದ್ದಾರೆ.

ಮುಂದುವರೆದು...

"ಚಿಮ್ಮಲಿ ಹಚ್ಚನೆಯ ಹಸಿರು
ನಿರ್ಮಲವಾಗಲಿ ಉಸಿರು
ಮತ್ತೆ ಆಗಲಿ ವಸುಂಧರೆ
ಸಕಲ ಜೀವಿಗಳಿಗಾಸರೆ".[೩]

ಚಿಮ್ಮಲಿ ಹಸಿರು ನಿರ್ಮಲವಾಗಲಿ ಉಸಿರು ಎಂದರೆ ಮಳೆ ಬರಲಿ ಆ ಮೂಲಕ ಗಿಡ ಮರಗಳೆಲ್ಲಾ ಚಿಗುರಿ ಗಾಳಿಯು ಶುದ್ದಗೊಳ್ಳಲಿ. ಹಾಗೆಯೇ ಭೂಮಿ ಮಳೆಯನ್ನು ಪಡೆದು ಎಲ್ಲಾ ಜೀವಿಗಳಿಗೂ ಆಸರೆಯಾಗಲಿ ಎಂದಿದ್ದಾರೆ. ಅಂದರೆ ಮರ ಗಿಡಗಳು ಹಸಿರಿನಿಂದ ಕೂಡಿರಲು ಜೀವಿಗಳಿಗೆ ಭೂಮಿಯು ಆಸರೆಯಾಗಲು ಮಳೆ ಬೇಕು. ಇಷ್ಟೆಲ್ಲ ಸಾಕಾರಗೊಳ್ಳುವುದು ಮಳೆಯಿಂದಲೆ. ಹಾಗಾಗಿ ಮಳೆ ಬರಲಿ ಎಂಬ ಭಾವ ಇದರಲ್ಲಿ ವ್ಯಕ್ತವಾಗಿದೆ.

ಮುಂದುವರೆದು ದುಮಿಕ್ಕಿಧುಮುಕಿ ಜಲಪಾತ.... ಕ್ರಿಯಾಶೀಲತೆಗೆ ಇಂಧನ. ಎಂದರೆ ಜಲಪಾತ ತುಂಬಿ ಹರಿಯಲು ಜಡತೆಯನ್ನು ಹೋಗಲಾಡಿಸಲು ಮಳೆ ಬೇಕು. ಅಂದರೆ ಮಳೆ ಸಕಲ ಜೀವ ಜಗತ್ತಿಗೂ ಚೇತನ. ಜಲಪಾತದ ರೀತಿಯಲ್ಲಿ ನಿರಂತರವಾಗಿ ಬದಲಾವಣೆಯನ್ನು ತರುವಂತಹದ್ದು ಎಂದಿದ್ದಾರೆ. ಆ ಮೂಲಕ ಹೊಮ್ಮಲಿ ಹೊಸ ಚೇತನ ಕ್ರೀಯಾಶೀಲತೆಗೆ ಇಂಧನ. ಎಂದರೆ ಮಳೆಯು ಎಲ್ಲದರ ಚೇತನ

ಶಕ್ತಿಯಾಗಿದೆ. ಹಾಗಾಗಿ ಮಳೆಯು ಬರಲಿ. ಮಳೆ ಬಂದು ಎಲ್ಲಾ ಕ್ಷೇತ್ರದಲ್ಲೂ ಬದಲಾವಣೆ ತರಲಿ ಎಂಬ ಆಶಯವಿದೆ.

ಮುಂದುವರೆದು...

"ತೊನೆಯಲಿ ತೆನೆ ಹೊಂದೇರು
ಅಡಗಲಿ ಹಸಿವಿನಚೀರು
ಅರಳಲಿ ಎಲ್ಲೆಡೆ ಹೂನಗೆ
ಹಾಯೆನಿಸಲಿ ಬೂತಾಯಿಗೆ"[೪]

ಮಳೆ ಬರಲಿ ಎಂಬ ಆಶಯದೊಂದಿಗೆ ತೂಗಾಡಲಿ ತೆನೆಗಳು ಹಾಗೆಯೇ ಬಂಗಾರದ ತೇರು ತೂಗಾಡಲಿ ಹಸಿವಿನ ನೋವು ಚೀರಾಟ ಕಾಣದಾಗಲಿ, ಕಡಿಮೆಯಾಗಲಿ, ಹಾಗೂ ಭೂಮಿಯ ತುಂಬೆಲ್ಲಾ ಹೂ ನಗೆ ಹರಡಲಿ, ಆರಾಮದಾಯಕವೆನಿಸಲಿ. ಇಷ್ಟೆಲ್ಲಾ ಆಗಬೇಕಂದರೆ ಮಳೆ ಸುರಿಯಲಿ, ತಂಪೆರೆಯಲಿ ಎಂದಿದ್ದಾರೆ.

ಸು. ರಂ. ಎಕ್ಕುಂಡಿಯವರು "ಮುತ್ತೈದೆ ಬರುವಳೆಂದು" ಎಂಬ ಕವನದಲ್ಲಿ ಮಳೆಯನ್ನು ಈ ರೀತಿಯಾಗಿ ಸ್ವಾಗತಿಸಿದ್ದಾರೆ.

"ತೋರಣವ ಕಟ್ಟಿ ಗುಡಿ
ಕೇರಿಗಳ ಸಿಂಗರಿಸಿ
ಮುತ್ತೈದೆ ಬರುವಳೆಂದು
ನೆಲ ಮುಗಿಲು ಹರಿದಾರಿ
ಜಯ ಘೋಷದಂಬಾಲಿ
ಇವಳ ಸ್ವಾಗತಿಸಲೆಂದು"[೫],

ಮಳೆಯನ್ನು ಮುತ್ತೈದೆಯೊಂದಿಗೆ ಸಮೀಕರಿಸಿ, ಮಳೆಯು ಪ್ರಕೃತಿಯ ಒಳಿತಿಗಾಗಿ ಬರುತ್ತಿದೆ ಎಂದಿದ್ದಾರೆ. ಇಂತಹ ಮಳೆಯನ್ನು ತೋರಣಕಟ್ಟಿ ಗುಡಿ ಕೇರಿಗಳನ್ನು ಸಿಂಗರಿಸಿ ಮುತ್ತೈದೆ ಬರುವಳೆಂದು ಸಿಂಗರಿಸಿ ಎಂದಿದ್ದಾರೆ. ಅಂದರೆ ವಸಂತದ ಆಗಮನದಲ್ಲಿ ಪ್ರಕೃತಿಯು ಸಿಂಗಾರಗೊಳ್ಳುವಂತೆ ಸಿಂಗರಿಸಲಾಗಿದೆ ಎಂದಿದ್ದಾರೆ. ಮುಂದುವರೆದು...

ವೃಕ್ಷಗಳು ಹೂ ಮುಡಿದು
ಮುಗಿಲಿನೆದೆ ಮುಕ್ಕುತ್ತಿದೆ

ಎಂದರೆ ಮುತ್ತೈದೆಗೆ ತನ್ನ ತವರು ಮನೆಗೆ ಬರಲು ಆಸೆಯಾದಂತೆ ಮಳೆಗೂ ಇಲ್ಲಿನ ಪ್ರಕೃತಿಗೆ ಅದರ ಸೌಂದರ್ಯಕ್ಕೆ ಶರಣಾಗಿ ಬಯಸಿ ಬರುವಂತೆ ಸಿಂಗರಿಸಲಾಗಿದೆ ಎಂಬ ಭಾವವಿದೆ.

ಕನ್ನಡ ಸಾಹಿತ್ಯದ ಮತ್ತೊಬ್ಬ ಕವಿಯತ್ರಿ ವಿಜಯ ಸುಬ್ಬರಾವ್ ಅವರ 'ಹಾಡೆನಾ ಪಾಡೆನಾ' ಎಂಬ ಕವನ ಸಂಕಲನದಲ್ಲಿನ 'ಮಳೆ' ಕವನದಲ್ಲಿ ವಿಶಿಷ್ಟ ರೀತಿಯಲ್ಲಿ ಮಳೆಗೆ ಸ್ವಾಗತವನ್ನು ಕೋರುವ ಪ್ರಯತ್ನ ಮಾಡಿದ್ದಾರೆ...

ಜಿದ್ದುಕಟ್ಟಿ ಕೆಂಡಸುರಿದ ಸೂರ್ಯ
ನೆಲದ ಮೊರೆ ಕೇಳಲಿಲ್ಲ
ಬೇಕೆಂದೇ ಬಾನ ಬೀದಿಗಳಲ್ಲಿ
ಅಲೆದಾಡಿ ಹಕ್ಕಿ ಗಂಟಲ ಕೊಯ್ದು
ರೆಕ್ಕೆ ಕತ್ತರಿಸಿ ಚಿತೆಗೊಡ್ಡಿದ"[೬]

ಜಿದ್ದು ಕಟ್ಟಿ ಕೆಂಡ ಸುರಿಸಿದ ಸೂರ್ಯ ಎಂದರೆ ಭೂಮಿಯ ಮೇಲಿನ ದ್ವೇಷದಿಂದ ಸೂರ್ಯ ತನ್ನ ಪ್ರಖರ ಕಿರಣಗಳಿಂದ ಕೆಂಡವನ್ನು ಸುರಿದ. ನೆಲದ ಮೊರೆಯನ್ನು ಕೇಳಲಿಲ್ಲ. ಅಂದರೆ ಭೂಮಿ ಮಳೆಗಾಗಿ ಕಾದಿದೆ. ಆದರೆ ಬರುತ್ತಿಲ್ಲ. ಸೂರ್ಯ ಬೇಕೆಂತಲೇ ಬಾನ ಬೀದಿಗಳಲ್ಲಿ ಅಲೆದಾಡಿ ಹಕ್ಕಿಗಳ ಗಂಟಲ ಕೊಯ್ದು ರೆಕ್ಕೆ ಕತ್ತರಿಸಿ ಚಿತೆಗೊಡ್ಡಿದ್ದ. ಅಂದರೆ ಮಳೆಯಿಂದ ಸಂತೋಷಗೊಳ್ಳುವ ಹಕ್ಕಿ ಪಕ್ಷಿಗಳು ಮಳೆ ಬಂದರೆ ಮಧುರವಾದ ಗಾನವನ್ನು ಹಾಡುತ್ತವೆ. ಮಳೆ ಬರದೆ ಇರುವುದೊಂದಿಗೆ ಸೂರ್ಯನ ಹೆಚ್ಚಿದ ಶಾಖ ಹಕ್ಕಿ ಪಕ್ಷಿಗಳನ್ನು ಮೂಕವಾಗಿಸಿದೆ. ಕೇವಲ ಮೂಕವಾಗಿಸದೆ ರೆಕ್ಕೆಗಳ ಕತ್ತರಿಸಿ ಚಿತೆಗೊಡ್ಡಿದೆ ಎಂದಿದ್ದಾರೆ. ಆ ಮೂಲಕ ಮಳೆ ಬರಬೇಕೆಂಬ ಆಶಯವನ್ನು ಒಳ ದನಿಯಾಗಿ ಅಡಗಿಸಿಟ್ಟಿದ್ದಾರೆ.

"ದೂರ ದೂರದವರೆಗೆ ದರಿದ್ರ ಮೌನ
ಕುಡಿದ ಬಿಸಿಲು ಗಂಟಲಿರಿದು
ಮರಮರ ಸದ್ದಡಗಿ ನಿಸ್ತಬ್ಧ ಸಾಲು ಮರ
ನಗೆ ಸಮಾದಿಯೊಳಗೆ ಮುಳು ಅಳುವ ಚಿಟ್ಟೆ ಹೂವು"[೭]

ಇಲ್ಲಿ ವಿಜಯ ಸುಬ್ಬರಾವ್ ಅವರು ಮಳೆ ಬರದೆ ಇರುವ ಕಾರಣದಿಂದಾಗಿ ಉಂಟಾಗುತ್ತಿರುವ ಪರಿಣಾಮಗಳನ್ನು ತಿಳಿಸುತ್ತಾ ಮಳೆ ಬರಲೆಂಬ ಆಶಯವನ್ನು ವ್ಯಕ್ತಪಡಿಸುತ್ತಿದ್ದಾರೆ. ದೂರ ದೂರದವರೆಗೂ ಸಹ ಮೌನ ಆವರಿಸಿದೆ. ಅತಿಯಾದ ಬಿಸಿಲು ಗಂಟಲನ್ನು ಇರಿದಿದೆ. ಗಂಟಲಿಂದ ಶಬ್ದವೇ ಬರುತ್ತಿಲ್ಲ. ಮರಗಳೆಲ್ಲ ನಿಶಬ್ದವಾಗಿವೆ, ಸದ್ದಡಗಿದೆ. ಚಿಟ್ಟೆಗಳು ನಗೆ ಸಮಾಧಿಯಲ್ಲಿ ಅಳುತ್ತಿವೆ. ಈ ರೂಪಕವನ್ನು ತರುವ ಮೂಲಕ ಮಳೆಗಾಗಿ ಎಲ್ಲಾ ಪ್ರಾಣಿಗಳು, ಚಿಟ್ಟೆಗಳು ಸಹ ಕಾದಿವೆ ಎಂದು ಹೇಳುತ್ತಾರೆ.

"ಒಳಗೆ ಉರಿ ಹೊರಗೆ ಉರಿ
ಸುಟ್ಟು ಕರಕಲಾದ ಕಪ್ಪು ತೊಗಲು
ಸುಕ್ಕುಗಳ ನಡುವೆ ಬಿಕ್ಕುಗಳ ನಡುವೆ
ಹಣೆಗೆ ಕೈಯಿಟ್ಟು ಆಗಸಕೆ ನೆಟ್ಟ ಮುದುಕ
ಕರಿ ಮೋಡಗಳ ಕರಿಯುತ್ತಾನೆ"[೮]

ಮಳೆಯನ್ನು ಯಾರು ಸ್ವಾಗತಿಸುವರೆಂಬುದನ್ನು ತಿಳಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಅಂತರಾಳದಲ್ಲಿ ಉರಿಯನ್ನು ಮೇಲು ಉರಿಯನ್ನು ಹೊದಿರುವಂತಹ ಸುಟ್ಟಂತೆ ಕಪ್ಪಾಗಿರುವ ಚರ್ಮವನ್ನು ಹೊಂದಿರುವ ಸುಕ್ಕು ಬಿಕ್ಕುಗಳ ನಡುವೆ ಅಂದರೆ ವಯಸ್ಸಾದ ಮುದುಕನು ಹಣೆಗೆ ಕೈಯನ್ನಿಟ್ಟುಕೊಂಡು ಮಳೆ ಬರಲೆಂದು ತನ್ನ ಮನಸ್ಸಿನ ಆಸೆಯ ಕಣ್ಣನ್ನು ಆಗಸದಲ್ಲಿಟ್ಟು ಮೋಡಗಳನ್ನು ಕರೆಯುತ್ತಾನೆ. ಭಗೀರಥನು ಸಹ ಮಳೆಯನ್ನು ಕರೆಯುತ್ತಾನೆ. ಮಳೆ ಬಂದಿದ್ದೆ ಆದರೆ ಭೂಮಿ ಆಕಾಶ ಸೇರಿಯಾವು, ಚಿತ್ತಾರ ಮೂಡಿತು ಎಂದಿದ್ದಾರೆ. ಹೀಗೆ ಹಣ್ಣು ಹಣ್ಣು ಮುದುಕ, ರೈತ, ಭಗೀರಥ ಎಲ್ಲರ ಬೇಡಿಕೆಯಿಂದ ಮಳೆ ಬಂದರೆ ಹಸಿರು ಚಿತ್ತಾರ ಎಲ್ಲಾ ಕಡೆಯಲ್ಲೂ ಮೂಡುತ್ತದೆ ಎಂದಿದ್ದಾರೆ.

ಮುಂದುವರೆದು...

"ಯುಗದ ಕೊಳೆ ಜಗದ ಕೊಳೆ
ಕೊಚ್ಚಿ ಕಮನಿಯ ಕನಸುಗಳು
ಹೊಗರಿಡುವ ಮನಸುಗಳು ಗಂಧರ್ವ ಲೋಕಗಳು ಇಳಿದಾವು
ಪ್ರೀತಿ ಪ್ರೇಮಗಳು ಉಳಿದಾವು
ಪರ್ಜನ್ಯ ಮಂತ್ರಗಳ ಕರೆಯುತ್ತಾನೆ
ಕಾದ ಭೂಮಿಯೆದೆಗಿಷ್ಟು
ಕಣ್ಣ ಹನಿಹನಿಸುತ್ತಾನೆ

ಹುಣ ಸವರುತ್ತಾನೆ"[೯]

ಎಲ್ಲರ ಬೇಡಿಕೆಗೆ ಮಣಿದು ಮಳೆ ಬಂದಿದ್ದೆ ಆದರೆ ಯುಗದ ಕೊಳೆ ಜಗದ ಕೊಳೆ ಎಲ್ಲವೂ ಕೊಚ್ಚಿಹೋಗುತ್ತದೆ. ಸುವಾಸನೆ ಭರಿತ ಕನಸುಗಳು ಅವುಗಳನ್ನೆಲ್ಲಾ ಹೊರಗಿಡುವ ಮನಸ್ಸುಗಳು ಗಂಧರ್ವ ಲೋಕಗಳೂ ಇಳಿದಾವು. ಅದಕ್ಕಾಗಿ ಮಳೆ ಬರಲಿ ಎಂದು ಬೇಡುತ್ತಿದ್ದಾರೆ. ಯುಗದ ಕೊಳೆ ಜಗದ ಕೊಳೆಗಳನ್ನು ತೊಳೆಯಲು ಮಳೆ ಅತ್ಯಗತ್ಯವಾಗಿದೆ. ಅದಕ್ಕಾಗಿಯಾದರು ಮಳೆ ಬರಲಿ. ಈ ಮಳೆ ಬಂದರೆ ಪ್ರೀತಿ ಪ್ರೇಮಗಳು ಉಳಿಯುತ್ತವೆ. ಉಪಟಳ ದೇವತೆಯಾದ ಪರ್ಜನ್ಯವನ್ನು ಮಂತ್ರಗಳಲ್ಲಿ ಕರೆಯುತ್ತಾನೆ. ಬಿಸಿಲ ಬೇಗೆಯಿಂದ ಕಾದ ಭೂಮಿಗಿಷ್ಟು ಕಣ್ಣ ಹನಿ ಹನಿಸಲು ಹಣೆ ಸವುರುತ್ತಾನೆ. ಎಂದರೆ ಮರವನ್ನು ಸವರುತ್ತಾನೆ. ಹೀಗೆ ಭಿನ್ನವಾಗಿ ಮಳೆಗೆ ಸ್ವಾಗತವನ್ನು ಬಯಸುತ್ತಾರೆ.

ದ. ರಾ. ಬೇಂದ್ರೆ ಅವರು ಮಳೆಗೆ ಮತ್ತೊಂದು ರೀತಿಯಲ್ಲಿ ಸ್ವಾಗತವನ್ನು ಬಯಸಿದ್ದಾರೆ. ಮಳೆಯು ನಮಗೆ ಸಂತೋಷವನ್ನು ತಂದುಕೊಡುತ್ತದೆ. ಮಳೆ ಬಂದರೆ ಅದರಲ್ಲಿ ನೆನೆದು ಆನಂದ ಪಡೆಯುವೆವು ಎಂಬ ಅಭಿಲಾಷೆಯೊಂದಿಗೆ ಮಳೆಗೆ ಸ್ವಾಗತವನ್ನು ಬಯಸಿದ್ದಾರೆ.

"ಮಳೆ ಬರುವ ಕಾಲಕ್ಕ
ಒಳಗ್ಯಾಕ ಕೂತೇವೋ
ಇಳಿಯೊಡನೆ ಜಳಕ ಮಾಡೋಣ
ನಾವುನು ಮೋಡಗಳ ಆಟ ನೋಡೋಣ"[೧೦]

ಮಳೆ ಬರುವ ಕಾಲದಲ್ಲಿ ನಾವು ಮನೆಯೊಳಗೆ ಏತಕ್ಕಾಗಿ ಕೂರುವುದು ಎಂದು ಪ್ರಶ್ನಿಸುತ್ತಾ ಅದಕ್ಕೆ ಉತ್ತರ ರೂಪದಲ್ಲಿ ಇಳಿಯೊಡನೆ ಜಳಕ ಮಾಡೋಣ ನಾವು ಸಹ ಮಳೆಯಲ್ಲಿ ಆಟ ಆಡೋಣ ಎನ್ನುತ್ತಾರೆ. ಅಂದರೆ ಮಳೆ ಬರುವ ಸಂದರ್ಭ ಅತ್ಯಂತ ಸಂತೋಷ ತರುವ ಸಂದರ್ಭ. ಮೋಡಗಳಂತೆ ನಾವೂ ಸಹ ಮಳೆಯಲ್ಲಿ ನೆನೆಯುತ್ತಾ ಆಟವಾಡೋಣ ಎಂದಿದ್ದಾರೆ. ಇದನ್ನು ಕುರಿತು ಡಿ. ಆರ್. ನಾಗರಾಜ್ ಅವರು "ಮಳೆಯನ್ನು ಆಹ್ವಾನಿಸಿದ ಕವಿಯ ಈ ಮಾತು, ಈಗ ಶುದ್ಧ ಹುಚ್ಚು ಎನಿಸುತ್ತದೆ. ಮಳೆ ಬೇಕು ನಿಜ. ಆದರೆ, ನಗರಗಳ ಬಡವರಿಗೆ ಶಾಪ ಮಳೆ. ಒಮ್ಮೆ ಮಳೆ ಮನಸ್ಸಿಗೆ ತುಂಬ ಪ್ರಿಯವಾದ ಲಯ ತರುತ್ತದೆ. ಇನ್ನೊಮ್ಮೆ ಅಸಾಧ್ಯ ಕೆಸರಲ್ಲಿ ಮನಸ್ಸನ್ನು ಹೂತು ಹಾಕಿಬಿಡುತ್ತದೆ"[೧೧] ಎಂದಿದ್ದಾರೆ.

ಬೇಂದ್ರೆಯವರು ಮುಂದುವರೆದು...

"ಮರಿ ಗುಡುಗು ಕಲೆವಾಗ
ಮಳೆಗಾಳಿ ಸೆಳೆವಾಗ
ಮರಗಿಡಗಳನು ಎಳೆವಾಗ
ನಾವ್ಯಾಕ ಮನೆಯಲಿ ಅವಿತು ಕೂತೆವೋ"[೧೨]

ಮರ ಗಿಡಗಳು ಮಳೆಯನ್ನು ಸೆಳೆಯುತ್ತವೆ. ಮಳೆಯ ಗಾಳಿ ಅದರೊಂದಿಗೆ ಗುಡುಗು ಸೇರುತ್ತದೆ. ಇಂತಹ ಸಂದರ್ಭದಲ್ಲಿ ನಾವ್ಯಾಕ ಮನೆಯಲ್ಲಿ ಅವಿತು ಕೂತೆವೋ ಎಂದಿದ್ದಾರೆ. ಗುಡುಗು ಮಳೆ ಮರಗಳು ಎಲ್ಲವು ಸೇರಿಕೊಂಡು ಭೂಮಿಗೆ ಮಳೆಯನ್ನು ತರುವಾಗ ನಾವು ಅವಿತು ಕೂರುವುದಿಲ್ಲ. ನಾವೂ ಅದರಲ್ಲಿ ಭಾಗಿಯಾಗುತ್ತೇವೆ ಮಳೆಯನ್ನು ಸ್ವಾಗತಿಸುತ್ತೇವೆ. ಮನಸ್ಸು ನಮ್ಮನ್ನು ಮಳೆಯಗಾಳಿ ಸೆಳೆಯುತ್ತಿದೆ. ಜೊತೆಗೆ ಮರಗಿಡಗಳೆಲ್ಲವು ಮಳೆಗೆ ಸ್ವಾಗತವನ್ನು ಬಯಸುತ್ತಿವೆ. ಹಾಗಾಗಿ ನಾವು ಮಳೆಯನ್ನು ತುಂಬು ಹೃದಯದಿಂದ ಸ್ವಾಗತಿಸುವೆವು ಎಂದಿದ್ದಾರೆ.

"ಕೋಲ್ಮಿಂಚು ಇಣಿಕಿಣಿಕಿ
ಕಣ್ಣುಣಿಸಿ ಕೆಣಕೆಣಕಿ
ಬಾ ಗೆಣೆಯ ಹೊರಗೆ ಎನುವಾಗ

ಒಳಸೇರಿ ಹರೆ ಮೀರಿದ್ಹಾಂಗ ಕುಳಿತೇವೊ"[೧೩]

ಕೋಲ್ಮಿಂಚು ಇಣಿಕಿಣಿಕಿ ತೋರುತ್ತದೆ. ಅದು ಕಣ್ಣನ್ನು ಕುಣಿಸಿ ಕೆಣ ಕೆಣಕಿ ಬಾ ಗೆಣೆಯ ಹೊರಗೆ ಎನ್ನುತ್ತಿದೆ. ಅಂದರೆ ಮಳೆಯು ಪ್ರಿಯತಮೆ ಪ್ರಿಯನನ್ನು ಪ್ರಣಯಕ್ಕೆ ಆಹ್ವಾನಿಸುವಂತೆ ಆಹ್ವಾನಿಸುತ್ತದೆ. ಇಂತಹ ಆಹ್ವಾನವನ್ನು ನೀಡುವಾಗ ನಾವು ವಯಸ್ಸು ಮೀರಿದ ಮುದಕರಂತೆ ಕುಳಿತುಕೊಳ್ಳುತೇವೆಯೋ ಎಂದು ಪ್ರಶ್ನಿಸುತ್ತಾ ಕೂರುವುದಿಲ್ಲ ಎಂಬ ಅರ್ಥದ ಭಾವ ಬರುವಂತೆ ವರ್ಣಿಸಿದ್ದಾರೆ. ಇಲ್ಲಿ ಪ್ರಕೃತಿಯೇ ಮಳೆಯನ್ನು ಆಹ್ವಾನಿಸುತ್ತದೆ. ಅಂತಹ ಸಂದರ್ಭದಲ್ಲಿ ನಾವು ಸುಮ್ಮನಿರಲು ಸಾಧ್ಯವಿಲ್ಲ ಎಂದು ಹೇಳುತ್ತಿದ್ದಾರೆ. ಹೀಗೆ ಮಳೆಯನ್ನು ಸ್ವಾಗತಿಸಿದ ಬೇಂದ್ರೆ ಅವರು ತಮ್ಮ 'ಬಾ ಬೇಗ' ಎಂಬ ಕವನದಲ್ಲಿ ಬೇರೆಯದೆ ಅಭಿವ್ಯಕ್ತಿ ಕ್ರಮದಲ್ಲಿ ಮಳೆಯನ್ನು ಸ್ವಾಗತ ಮಾಡಿದ್ದಾರೆ.

"ಓ ಮೇಘರಾಜ ಘನ ವಿದ್ಯುಲ್ಲತಾ ತೇಜ
ಓಜೆ ಗುಂದಿದನಿಂದು ರವಿರಾಜ, ಆ ಗ್ರೀಷ್ಮ
ಭೀಷ್ಮ ಭಾಸ್ಕರತೆ ಎಂದೋ ಮಸಳಿ, ನೀ ಬಂದೆ
ತಂದೆ ಜೀವನದಾಶೆ, ಕಷ್ಟಿಕರೀಕ್ಷಣದಲ್ಲಿ
ಸ್ಫುರಿಸೆ ಜಾತಕ ಭಾಷೆ, ರಿಕ್ತ ಧ್ವನಿಯಾಗಿ ಗ
ರ್ಜಿಸಬೇಡ ; ಸುಪ್ತ ಬೀಜವು ಬೇಡದೇನೊ ಜೀ
ವನ ಮೋಕ್ಷ, ಅಗೋ ಅಲ್ಲಿ ಏಕಾಕ್ಷ ದಾಂಪತ್ಯ
ಕರೆಕರೆಯೊಳೇಕೊ ಕರೆಯುತ್ತಿಹುದು ಬಾ ಬೇಗ"[೧೪]

ಮಳೆಯನ್ನು ಮೆಘರಾಜ ಘನ ವಿದ್ಯುಲ್ಲತಾ ತೇಜ ಎಂದು ವರ್ಣಿಸಿದ್ದಾರೆ. ಈ ದಿನ ಸೂರ್ಯ ಕಳೆಗುಂದಿದ್ದಾನೆ. ಭೀಷ್ಮ ಗ್ರೀಷ್ಮ ಭಾಸ್ಕರತೆ ಎಂದರೆ ಇತರ ಋತುಗಳಲ್ಲಿನ ಸೂರ್ಯನ ಶಾಖ ಅತಿಯಾಗಿದೆ. ಆಗಲೇ ನೀನು ಬರಬೇಕಿತ್ತು ಎಂಬ ಭಾವ ಇದೆ. ಆ ಮೂಲಕ ಮಳೆ ಬರಲಿ ಎಂದು ಆಶಿಸುತ್ತಾರೆ. ನೀ ಬರದೆ ಭೂಮಿ ಮಸಳಿ ಅಂದರೆ ನೀಸ್ತೇಜವಾಗಿದೆ, ಕಾಂತಿ ಹೀನವಾಗಿದೆ ಎಂದಿದ್ದಾರೆ. ನೀ ಬಂದೆ ನಮ್ಮೆಲ್ಲರ ತಂದೆಯಾಗಿ ನಮ್ಮ ಜೀವನಕ್ಕೆ ಹೊಸ ಆಸೆಯಾಗಿ ಚೇತನವಾಗಿ. ಈ ಸಂದರ್ಭದಲ್ಲಿ ಎಲ್ಲಾ ಕೃಷಿಕರು ಸಹ ಈ ಕ್ಷಣದಿಂದಲೇ ಸಂತಸದಿಂದ ನಿನ್ನ ಹುಟ್ಟಿನ ಮಳೆಯ ರಾಶಿಗಳು ನಕ್ಷತ್ರಗಳನ್ನು ಕುರಿತು ಮಾತನಾಡುತ್ತಿದ್ದಾರೆ. ಮೇಘರಾಜನೇ ನೀನು ಬರಿದಾದ ಅಥವಾ ಶೂನ್ಯ ಧ್ವನಿಯಾಗಿ ಘರ್ಜಿಸಬೇಡ, ಎಂದರೆ ಹೆಚ್ಚಾಗಿ ಮಳೆ ಬರಲಿ ಎಂಬ ಭಾವವಿದೆ. ಆ ಮೂಲಕ ಮಳೆಗೆ ಕರೆ ಕೊಡುತ್ತಾರೆ. ನೀನು ಬರುವ ಮುಖೇನ ಜಗತ್ತಿನಲ್ಲಿ ಅಡಗಿದ ನಿದ್ರೆ ಹೋದಂತಹ ಬೀಜವು ಬೇಡವೇನೋ ಎಂದು ಕೇಳುತ್ತಾ ಜೀವನಕ್ಕೆ ಮೋಕ್ಷದ ಕಣಿ ನೀನು ಎಂದು ಹೇಳುತ್ತಾರೆ. ಜೋಡಿ ಕಾಗೆಗಳು ಕರೆಯುತ್ತಿವೆ ನಿನ್ನ ಎನ್ನುತ್ತಾ ಅದೇ ರೀತಿ ಅಲ್ಲಿ ದಾಂಪತ್ಯಕ್ಕೆ ಕರೆಯುತ್ತಿಯುವುದು. ಬಾ ಬೇಗ ಎಂದರೆ ನೀನು ಭೂಮಿಯನ್ನು ಸೇರಿ ಹೊಸ ಜೀವಿಗಳ ಸೃಷ್ಟಿಗೆ ದಾರಿಯಾಗಬೇಕು. ಹೀಗೆ ಮಳೆಯನ್ನು ಅದರ ಸ್ವರೂಪವನ್ನು ಅದನ್ನು ಅವಲಂಬಿಸಿದ ಜೀವಜಾಲವನ್ನು ಕುರಿತು ಹೇಳುತ್ತಾ ಮಳೆಗೆ ತುಂಬು ಹೃದಯದಿಂದ ಸ್ವಾಗತವನ್ನು ಬಯಸುತ್ತಿದ್ದಾರೆ.

ಮುಂದುವರೆದು...

"ಓ ಘನವೆ ಜೀವನವೆ ಅಂತರಿಕ್ಷದೊಳಿಂತು
ಸಾಕ್ಷಿಕನ ತೆರದಿ ಸಂಚರಿಸುವುದೆ? ಇಳಿಯಣ್ಣ
ಕ್ಷೇತ್ರವಾಗಲಿ ಫಲ ರುಚಿರ ಗಾತ್ರ ಸತ್ಪಾತ್ರ
ಬಾಂಬೋಲದಿ ಬಂದರೇನು ಇಂದ್ರ ಚಾಪದ ಬಣ್ಣ"[೧೫]

ಬೇಂದ್ರೆಯವರು ಮಳೆಯನ್ನು ಓ ಘನವೆ ಎನ್ನುವ ಮೂಲಕ ಶ್ರೇಷ್ಠವಾದದ್ದು ಎಂದಿದ್ದಾರೆ. ಮಳೆಯೇ ನಿನ್ನ ಜೀವನವೇ ಅಂತರಿಕ್ಷದಲ್ಲಿ ಅಂದರೆ ಆಕಾಶದಲ್ಲಿದೆ. ನೀನು ಈ ಜಗತ್ತಿನಲ್ಲಿ ಸಾಕ್ಷಿಕನ ರೀತಿಯಲ್ಲಿ

ಸಂಚರಿಸುತ್ತಿರುವೆ. ಇಡೀ ಭೂಮಿಯನ್ನು ನೀನು ನೋಡುತ್ತಿರುವೆ ಎಂದು ಹೇಳುತ್ತಾ ಇಳಿಯಣ್ಣಾ ಎಂದು ಮೊರೆಯಿಡುತ್ತಾರೆ. ನೀನು ಇಳಿದುದ್ದೇ ಆದರೆ ಈ ಭೂಮಿಯು ಫಲವಾಗುತ್ತದೆ. ಅದು ರುಚಿರ ಗಾತ್ರ ಸತ್ಪಾತ್ರವು. ಆಕಾಶದ ತುಂಬೆಲ್ಲ ಬರಿದೇನು ಕಾಮನ ಬಿಲ್ಲು ಮತ್ತದರ ಬಣ್ಣ ಎಂದು ದೃಶ್ಯಕ್ಕೂ ಅದೃಶ್ಯಕ್ಕೂ ಕೊಡುಕೊಳೆಯೇ ಚೆಂದ ಎನ್ನುತ್ತಾರೆ. ಜೀವ ಮತ್ತು ಅಜೀವಕ್ಕೆ ದೈವಿಕವೇ ಬಂಧ ಎಂದು ಹೇಳುತ್ತಾರೆ. ಹೀಗೆ ಮಳೆ ಬಂದರೆ ಇಡೀ ಜೀವ ವ್ಯವಸ್ಥೆ ದೈವ ಸಾಕ್ಷಾತ್ಕಾರಕ್ಕೆ ಸಾಕ್ಷಿಯಾಗುತ್ತದೆ. ಮಳೆ ಮತ್ತು ಜೀವಜಾಲದ ಸಂಬಂಧ ಅಗಮ್ಯವಾದುದು ಎಂದಿದ್ದಾರೆ. ಒಟ್ಟಾರೆಯಾಗಿ ಬೇಂದ್ರೆಯವರು ತಮ್ಮ ಕವನಗಳಲ್ಲಿ ಮನುಷ್ಯನಿಗೆ ಅವನ ಜೀವನಕ್ಕೆ ಅವಶ್ಯಕವಾದ ಮಳೆಯನ್ನು ಆಹ್ವಾನಿಸಿದ್ದಾರೆ. ಅವರು ಮಳೆಯನ್ನು ಮೇಘರಾಜ ಎಂದಿದ್ದಾರೆ. ಬೇಂದ್ರೆಯವರು 'ಗಂಗಾವತರಣ' ಕವನ ಸಂಕಲನದಲ್ಲಿ ಇಳಿದು ಬಾ ತಾಯಿ ಎಂಬ ಕವನದಲ್ಲಿ ಮಳೆಗೆ ಸ್ವಾಗತವನ್ನು ಬಯಸಿ ಮಳೆ ಬರುವ ಸ್ವರೂಪದ ಹಿನ್ನೆಲೆಯನ್ನು ವಿವರಿಸಿದ್ದಾರೆ.

ಕವಿ ದೊಡ್ಡ ರಂಗೇಗೌಡ ಅವರು ಮಳೆಯನ್ನು ಬೇರೊಂದು ರೀತಿಯಲ್ಲಿ ಸ್ವಾಗತ ಕೋರಿದ್ದಾರೆ.

"ಮಳೆ ಬರುವ ಕಾಲಕ್ಕೆ ನಿಲ್ಲದ ಪುಳಕ
ಹೊಳೆ ಹರಿವ ಕಾಲಕ್ಕೆ ನೆಲಕೆ ನಿತ್ಯವು ಜಳಕ
ಬೆಳೆ ಬೆಳೆವ ಕಾಲಕ್ಕೆ ನೆಲಕೆ ಜಲಧಬಿಷೇಕ
ಇಳಿಗೆ ಮಳೆ ಬೇಕೇ ಬೇಕೋ ಮಣ್ಣಿನ ಮಗ"

ಮಳೆ ಬಂದರೆ ನೆಲಕ್ಕೆ ಪುಳಕ ಹೊಳೆ ಹರಿಯುವ ಕಾಲದಲ್ಲಿ ನೆಲಕ್ಕೆ ನಿತ್ಯವು ಜಳಕ. ಬೆಳೆಯನ್ನು ಬೆಳೆವ ಕಾಲದಲ್ಲಿ ನೆಲಕ್ಕೆ ಜಲದ ಅಭಿಷೇಕ ಇಳೆಗೆ ಮಳೆ ಬೇಕೆ ಬೇಕು. ಮಣ್ಣಿನ ಮಗ ಎಂದರೆ ಮಳೆ ಬರಲೇಬೇಕು ಮಳೆ ಬರದೆ ಇದ್ದರೆ ನೆಲವು ಬೆಳೆಯನ್ನು ಬೆಳೆಯಲಾರದು. ನೆಲಕ್ಕೆ ನೀರು ಸಿಗುವುದಿಲ್ಲ, ಅದಕ್ಕೆ ಜಲದ ಅಭಿಷೇಕ ಆಗುವುದಿಲ್ಲ ರೈತನಿಗೂ ಮಳೆ ಬೇಕು. ಮಳೆ ಬರದೆ ಇದ್ದರೆ ಆತನು ಬೇಸಾಯ ಮಾಡಿ ಬೆಳೆಯನ್ನು ಬೆಳೆಯಲಾರನು ಎಂದಿದ್ದಾರೆ.

ಡಿ. ಲಿಂಗಯ್ಯನವರು 'ಪುಣ್ಯ ಭೂಮಿ ಭಾರತ' ಎಂಬ ಕವನ ಸಂಕಲನದಲ್ಲಿ ಮಳೆಗೆ ಈ ರೀತಿಯಾಗಿ ಸ್ವಾಗತ ಕೋರಿದ್ದಾರೆ.

"ಮಳೆಯಿಂದ ಇಳಿ
ಇಳಿಯಿಂದ ಬೆಳೆ
ಬೆಳೆಯಿಂದ ಕಳೆ
ಕಳೆಯಿಂದ ಕಲೆ
ಕಲೆಯಿಂದ ಕ್ರಿಯೆ
ಕ್ರೀಯೆಯಿಂದ ಜೀವನ"[೧೬]

ಮಳೆಯು ಜಗತ್ತಿನ ಎಲ್ಲದಕ್ಕೂ ಮೂಲಾಧಾರ. ಮಳೆ ಬಂದರೆ ಮಾತ್ರ ಎಲ್ಲಾ ಚರಾಚರಗಳು ಉಳಿಯಲು ಸಾಧ್ಯ. ಹಾಗಾಗಿ ಮಳೆಯಿಂದಲೆ ಭೂಮಿ, ಭೂಮಿಯಿಂದ ಬೆಳೆ. ಹೀಗೆ ಒಂದಕ್ಕೊಂದು ಕೊಂಡಿಯ ರೂಪದಲ್ಲಿವೆ. ಬೆಳೆಯಿಂದ ಮಾತ್ರ ಎಲ್ಲರ ಮನಸ್ಸಿನಲ್ಲಿಯು ಸಹ ಕಳೆ ಬರಲು ಸಾಧ್ಯವಾಗುತ್ತದೆ. ಈ ಮನಸ್ಸಿನ ಸಂತೋಷದಿಂದ ಮಾತ್ರ ಕಲೆ ಹುಟ್ಟಲು ಸಾಧ್ಯವಾಗುತ್ತದೆ. ಈ ಕಲೆಯಿಂದಲೆ ಕೆಲಸಗಳು ನಡೆಯುತ್ತವೆ. ಹೀಗೆ ಮಳೆಯು ಬೆಳೆಗೆ, ಕಳೆಗೆ, ಕಲೆಗೆ, ಕ್ರಿಯೆಗೆ, ಜೀವನಕ್ಕೆ, ಎಲ್ಲದುಕ್ಕೂ ಆಧಾರವಾಗಿದೆ. ಹಾಗಾಗಿ ಮಳೆಯು ಅತ್ಯಂತ ಅವಶ್ಯಕವಾದುದ್ದು ಅದು ಬರಲೇಬೇಕೆಂದಿದ್ದಾರೆ.

ಭಾರತಿ ಪಾಟೀಲ ಅವರು 'ಅಕ್ಕ ಕೇಳವ್ವ' ಕವನ ಸಂಕಲನದಲ್ಲಿನ ಬರದ ಮಳೆ ಎಂಬ ಕವನದಲ್ಲಿ ಮಳೆಗೆ ಭಿನ್ನ ಅಭಿವ್ಯಕ್ತಿ ಕ್ರಮದಲ್ಲಿ ಸ್ವಾಗತವನ್ನು ಬಯಸಿದ್ದಾರೆ. ಅವರು ಫಲವತ್ತಾದ ಭೂಮಿಯು ಬೆಳೆಯನ್ನು ಕೊಡಲು ಕಾದು ಕುಳಿತಿದೆ. ಅದು ಸೂರ್ಯನ ಶಾಖದಿಂದ ಬಿಸಿಯಾಗಿದೆ. ಆದರೂ ಮಳೆ ಬರಲಿಲ್ಲವೆಂಬ

ಅಭಿಪ್ರಾಯ ವ್ಯಕ್ತಪಡಿಸುತ್ತಾ ಫಲವತ್ತಾದ ಭೂಮಿ ಇದ್ದರೂ ಮಳೆ ಇಲ್ಲದಿದ್ದರೆ ವ್ಯರ್ಥ ಎಂದಿದ್ದಾರೆ. ಕೇವಲ ರಕ್ತ ಮಾಂಸಕ್ಕೆ ತೆವಲು ಹತ್ತಿರುವವರಿಗೆ ಈ ಸಸ್ಯ ಶಾಮಲೆಯ ನೆನಪಾಗಲಿಲ್ಲ ಎಂದಿದ್ದಾರೆ.

ಮುಂದುವರೆದು...

"ನೆಲ ಬುರುಡು ಫಲವಿಲ್ಲ
ಮುರುಟಿ ಹೋಗಿರಲು
ಕಾಯ್ದು ಹಂಚಿನ ಮೇಲೆ
ಬೋರಾಡಲು."[೧೭]

ಮಳೆ ಬರದೆ ಇದ್ದುದರಿಂದ ನೆಲವೆಲ್ಲ ಬರಡಾಗಿದೆ. ಫಲವೇ ಇಲ್ಲದಂತಾಗಿದೆ. ಎಲ್ಲವೂ ಹಾಳಾಗಿ ಹೋಗಿದೆ. ಕಾಯ್ದು ಹಂಚಿನ ಮೇಲೆ ಬೋರಾಡುವಂತಾಗಿದೆ ಎಂದಿದ್ದಾರೆ. ಅಂದರೆ ಮಳೆ ಬರದೆ ಇದ್ದರೆ ಆಗುವ ಪರಿಣಾಮಗಳನ್ನು ತಿಳಿಸುತ್ತಾ ಮಳೆ ಬರಲಿ ಎಂಬ ಆಶಯದೊದಿಗೆ ವಿವರಿಸಿದ್ದಾರೆ. ಹೀಗೆ ಭಿನ್ನ ರೀತಿಯಲ್ಲಿ ಮಳೆಯನ್ನು ಆಹ್ವಾನಿಸಿದ್ದಾರೆ.

ಸಿ.ಪಿ. ಕೃಷ್ಣಕುಮಾರ್ ಅವರು ತಮ್ಮ 'ಮಳೆ' ಎಂಬ ಕವನದಲ್ಲಿ ಮಳೆಗೆ ಯಾವ ರೀತಿ ಸ್ವಾಗತಿಸಿದ್ದಾರೆ ಎಂದರೆ...

"ಪಟ್ಟಣದಲ್ಲಿ ಬಿದ್ದು ನಾಗರೀಕರ ಶಾಪಕ್ಕೆ
ಪಕ್ಕಾಗುವ ಮಳೆ ಪಕ್ಕದ ಹಳ್ಳಿಯಲ್ಲಿ
ಹುಯ್ಯೋ ಹುಯ್ಯೋ ಮಳೆರಾಯ"[೧೮]

ಸಿ. ಪಿ. ಕೃಷ್ಣಕುಮಾರ್ ಅವರು ಮಳೆಯು ಅವಶ್ಯಕವಾಗಿರುವುದು ಹಳ್ಳಿಯಲ್ಲಿ. ಅಲ್ಲಿ ಬರಬೇಕು ಆದರೆ ಮಳೆಯು ಅವಶ್ಯಕತೆ ಇಲ್ಲದ ಪಟ್ಟಣಗಳಲ್ಲಿ ಬರುತ್ತಿದೆ ಎಂದು ದೂರುತ್ತಾರೆ. ಮಳೆರಾಯ ದಯಮಾಡಿ ಹಳ್ಳಿಗಳಿಗೆ ಬಾ ಎಂದು ಹುಯ್ಯೋಹುಯ್ಯೋ ಮಳೆರಾಯ ಎಂಬ ಆಹ್ವಾನವನ್ನು ಕೊಡುತ್ತಾರೆ. ಮುಂದುವರೆದು ಮತ್ತೆ ದೂರುತ್ತಾರೆ. ಆಕಾಶದಲ್ಲಿ ಕವಿಯುತ್ತಿದೆ, ಮೋಡಗಳ ಕಪ್ಪು ಭರವಸೆ ಆದರೆ ಬಹಳ ಕಾಲ ಕಾರ್ಯ ರೂಪಕ್ಕಿಳಿವುದೇ ಇಲ್ಲ ಎಂದಿದ್ದಾರೆ. ಹೀಗೆ ಮಳೆಯನ್ನು ದೂರುತ್ತಲೇ ಮಳೆ ಬೇಕು ಎಂಬ ಆಶಯವನ್ನು ಓದುಗರಲ್ಲಿ ಮೂಡಿಸುತ್ತಾರೆ.

ಮಳೆಯು ಭೂಮಿಯ ಮೇಲಿನ ಎಲ್ಲಾ ಜೀವರಾಶಿಗಳಿಗೂ ಅವಶ್ಯಕ. ಮಳೆಯನ್ನು ಅವಲಂಬಿಸಿ ಕೃಷಿ ವ್ಯವಸ್ಥೆ ಇದೆ. ರೈತನು ಮಳೆಗಾಗಿ ಕಾದು ಕುಳಿತಿರುತ್ತಾನೆ. ಮಳೆ ಬಂದರೆ ಬೆಳೆ, ಬೆಳೆಯನ್ನು ಬೆಳೆಯಬೇಕೆಂದರೆ ಮಳೆ ಬೇಕು. ಅದಕ್ಕಾಗಿ ರೈತನು ಸೇರಿದಂತೆ ಎಲ್ಲರೂ ಮಳೆಯನ್ನು ತುಂಬು ಗೌರವದಿಂದ ಬರಲೆಂದು ಆಶಿಸುತ್ತಾರೆ. ಕನ್ನಡದ ಕವಿಗಳು ಸಹ ಮಳೆಯನ್ನು ತುಂಬು ಹೃದಯದಿಂದ ಸ್ವಾಗತಿಸಿರುವುದನ್ನು ನಾವು ಕಾಣಬಹುದು. ಅದಕ್ಕಾಗಿ ತೋರಣ ಕಟ್ಟಿ ಮುತ್ತೈದೆಯನ್ನು ಸ್ವಾಗತಿಸುವಂತೆ ಸ್ವಾಗತಿಸಿದ್ದಾರೆ. ಬೇಂದ್ರೆಯವರು ಮಳೆ ಬರುವ ಕಾಲಕ್ಕೆ ಪುಳಕ ನಿಲ್ಲುವುದಿಲ್ಲ ಎಂದು ಹೇಳುತ್ತಾ ಮಳೆಯನ್ನು ಯಾವ ರೀತಿ ಆದರದಿಂದ ಸ್ವಾಗತಿಸಲಾಗುತ್ತದೆಂಬುದನ್ನು ವಿವರಿಸಿದ್ದಾರೆ. ಒಟ್ಟಾರೆಯಾಗಿ ಮಳೆಯನ್ನು ಕಾವ್ಯದ ಉದ್ದಕ್ಕೂ ತುಂಬು ಗೌರವದಿಂದ ಸ್ವಾಗತಿಸಿದ್ದಾರೆ.

**ಕೊನೆ ಟಿಪ್ಪಣಿಗಳು**

೧. ದಿನಪತ್ರಿಕೆ ಪ್ರಜಾವಾಣಿ, ಮುಕ್ತ ಛಂದ ವಿಭಾಗ ಲೇಖನ– ಮಳೆಗೆ ಮುನ್ನ, ಗೋವಿಂದರಾಜ ಜವಳಿ, ದಿನಾಂಕ– ೧೨/ ಜೂನ್ – ೨೦೧೬

೨. ಕ್ಯಾಮರ ಕಣ್ಣು, ಲಕ್ಷ್ಮಣರಾವ್ ಬಿ. ಎಸ್. ಪುಟ ಸಂಖ್ಯೆ ೧೮

೩. ಅದೇ ಪುಟ

೪. ಅದೇ ಪುಟ

೫. ಸುಬ್ಬಣ್ಣ ರಂಗನಾಥ ಎಕ್ಕುಂಡಿಯವರ ಸಮಗ್ರ ಕಾವ್ಯ (ಬೆಳ್ಳಕ್ಕಿಹಿಂಡು), (ಸಂ) :ಪ್ರಹ್ಲಾದ್. ಪುಟ ಸಂಖ್ಯೆ– ೨೧೮

೬. ಹಾಡೇನಾ ಪಾಡೇನಾ, ವಿಜಯ ಸುಬ್ಬರಾವ್, ಪುಟ ಸಂಖ್ಯೆ ೧೭

೭. ಅದೇ ಪುಟ

೮. ಅದೇ ಪುಟ

೯. ಔದಂಬರ ಗಾಥೆ, ಸಂಪುಟ–೪, ಬೇಂದ್ರೆ ಜೀವನ ಮಹಾಕಾವ್ಯ, ಸಂ. ವಾಮನ ಬೇಂದ್ರೆ, ಪುಟ ಸಂಖ್ಯೆ ೨೩೬

೧೦. ಸಂಸ್ಕೃತಿ ಕಥನ : ನಾಗರಾಜ್ ಡಿ.ಆರ್. ಸಂಪಾದಕ ಅಗ್ರಹಾರ ಕೃಷ್ಣಮೂರ್ತಿ. ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು, ೨೦೦೨ ಪುಟ ಸಂಖ್ಯೆ – ೨೯

೧೧. ಔದಂಬರಗಾಥೆ, ಸಂಪುಟ–೪, ಬೇಂದ್ರೆ ಜೀವನ ಮಹಾಕಾವ್ಯ, ಸಂ. ವಾಮನ ಬೇಂದ್ರೆ, ಪುಟ ಸಂಖ್ಯೆ ೨೩೬

೧೨. ಉಯ್ಯಾಲೆ :ದ.ರಾ. ಬೇಂದ್ರೆ, ಪುಟ ಸಂಖ್ಯೆ ೬೬

೧೩. ಉತ್ತರಾಯಣ :ದ.ರಾ. ಬೇಂದ್ರೆ, ಪುಟ ಸಂಖ್ಯೆ ೨೨

೧೪. ಅದೇ ಪುಟ

೧೫. ಮಣ್ಣು ಭೂಮಿ: ಲಿಂಗಯ್ಯ ಡಿ. ಪುಟ ಸಂಖ್ಯೆ ೫೪

೧೬. ಅಕ್ಕ ಕೇಳವ್ವ : ಭಾರತಿ ಪಾಟೀಲ ಪುಟ ಸಂಖ್ಯೆ ೨೩

೧೭. ಸಿ. ಪಿ. ಕೆ. ಸಮಗ್ರ ಕಾವ್ಯ ಪುಟ ಸಂಖ್ಯೆ ೪೧೨

# ಅಧ್ಯಾಯ – ನಾಲ್ಕು

## ಮಳೆ ಬಂದ ಪರಿಣಾಮ : ಪ್ರಕೃತಿಯ ಮೇಲೆ

### ಪೀಠಿಕೆ

'ನಾಸ್ತಿಮೇಘ ಸಮತೋಯಂ' ಮಳೆ ನೀರಿಗೆ ಸಮಾನವಾದ ನೀರು ಮತ್ತೊಂದಿಲ್ಲ. ಮಳೆರಾಯ ನಡೆಸಿದರನೇ ಹೊಟ್ಟೆಗೆ ಕಾಳು ಮೈಗೆ ಬಟ್ಟೆ ಎಂಬುದು ಹಳ್ಳಿಗಳಲ್ಲಿ ಜನ ಜನಿತವಾದ ಮಾತಾಗಿದೆ. ಅದು ಸತ್ಯವಾದ ಮಾತು. ಮಳೆಯನ್ನು ಅವಲಂಬಿಸಿಯೇ ನಮ್ಮ ಬದುಕು ಇದೆ. ಬೇಸಿಗೆಯ ಧಗೆ ಕಳೆದು ಪ್ರಥಮ ಮಳೆ ಸುರಿದು ಭೂಮಿ ತಂಪಾದಾಗ ನಮ್ಮ ಮನಸ್ಸಿಗೆ ಉಂಟಾಗುವ ಆನಂದ ಅವರ್ಣನೀಯವಾದದ್ದು. ಮಳೆ ಸಮೃದ್ಧಿಯ ಸಂಕೇತ. ಆದರೆ ಮಳೆ ಬಾರದಾಗ ಬರಗಾಲದ ಕರಿನೆರಳು ನಮ್ಮ ಮೇಲೆ ಆವರಿಸುತ್ತದೆ.

ಮಳೆಗಾಗಿ ಇಡೀ ಪರಿಸರ ವ್ಯವಸ್ಥೆ ಕಾದಿದೆ. ಮಳೆ ಬಂದರೆ ಮಾತ್ರ ಭೂಮಿಯ ಮೇಲಿನ ಎಲ್ಲಾ ಸಸ್ಯ ರಾಶಿಗಳು ಪ್ರತಿಯೊಂದು ಜೀವಿಗಳು ಬದುಕಲು ಸಾಧ್ಯವಾಗುತ್ತದೆ. ಮಳೆ ಬಾರದೆ ಹೋದರೆ ಎಲ್ಲಾ ಜೀವರಾಶಿಗಳು ಮತ್ತು ಸಸ್ಯಗಳು ಸಹ ಅವನತಿಯನ್ನು ಹೊಂದುತ್ತವೆ.

ಕನ್ನಡ ಸಾಹಿತ್ಯದಲ್ಲಿ ಪ್ರಕೃತಿಯ ವೈವಿಧ್ಯಮಯವಾದ ಸಂಪ್ರದಾಯ ಬದ್ದವಾದ ವರ್ಣನೆಗಳನ್ನು ಕಾಣುತ್ತೇವೆ. ಆರಂಭದ ಮತ್ತು ಮಧ್ಯಕಾಲೀನ ಕನ್ನಡ ಸಾಹಿತ್ಯದಲ್ಲಿಯೂ ಪ್ರಕೃತಿಯ ವೈವಿಧ್ಯಮಯ ಸಂಪ್ರದಾಯಬದ್ಧ ರೀತಿಯ ವರ್ಣನೆಗಳನ್ನು ಕಾಣುತ್ತೇವೆ. ಆರಂಭದ ಮತ್ತು ಮಧ್ಯಕಾಲಿನ ಸಾಹಿತ್ಯದಲ್ಲಿ ಅಷ್ಟಾದಶ ವರ್ಣನೆ ಕಡ್ಡಾಯವೆಂಬ ರೀತಿಯಲ್ಲಿ ವರ್ಣನೆಯನ್ನು ಕಾವ್ಯದಲ್ಲಿ ತಂದಿದ್ದಾರೆ. ಕೆಲವು ಸೃಜನಶೀಲ ಕವಿಗಳು ತಮ್ಮ ಪ್ರತಿಭಾಶಕ್ತಿಯಿಂದ ಉತ್ತಮ ರೀತಿಯಲ್ಲಿ ಕಾವ್ಯ ರಚನೆ ಮತ್ತು ಪ್ರಕೃತಿಯನ್ನು ವರ್ಣನೆ ಮಾಡಿದ್ದಾರೆ. ಹಾಗೂ ಕನ್ನಡ ಕಾವ್ಯದ ಸೊಬಗನ್ನು ಶ್ರೀಮಂತಗೊಳಿಸಿದ್ದಾರೆ. ಅಷ್ಟಾದಶ ವರ್ಣನೆಯ ಸಂದರ್ಭದಲ್ಲಿ ಬರುವ ಪ್ರಕೃತಿ ವರ್ಣನೆಗಳಲ್ಲಿ ಹೆಚ್ಚಿನವು ಬಹಳಷ್ಟು ಯಾಂತ್ರಿಕ ಹಾಗೂ ನೀರಸದಿಂದ ಕೂಡಿರುವುದು ಕಂಡುಬರುತ್ತದೆ. ಕಾವ್ಯವನ್ನು ರಚಿಸುವಾಗ ಅಷ್ಟಾದಶ ವರ್ಣನೆಯ ಅವಶ್ಯಕತೆ ಇರಲಿ ಇಲ್ಲದಿರಲಿ ಲಾಕ್ಷಣಿಕರು ಹೇಳಿದ ಹದಿನೆಂಟು ವರ್ಣನೆಗಳನ್ನು ಸಂದರ್ಭಕ್ಕೆ ತಕ್ಕಂತೆ ಕಾವ್ಯದಲ್ಲಿ ಸೇರಿಸಲೇಬೇಕಾಗಿತ್ತು. ನಿಯಮ ಮೀರಿದರೆ ಕಾವ್ಯಕ್ಕೆ ಪಂಡಿತ ಪಾಮರರಿಂದ ಮಾನ್ಯತೆ ದೊರೆಯುತ್ತಿರಲಿಲ್ಲ. ಆದ್ದರಿಂದ ಸಂಪ್ರದಾಯಕ್ಕೆ ಕವಿಗಳು ಶರಣಾಗಿದ್ದರು. ಅಂತಹ ನಿರ್ಬಂಧದ ನಡುವೆಯೂ ಪಂಪ, ಜನ್ನ, ನಾಗಚಂದ್ರ ಮುಂತಾದವರು ತಮ್ಮ ಪ್ರತಿಭಾಶಕ್ತಿಯಿಂದ ಪ್ರಕೃತಿಯ ವರ್ಣನೆಗೆ ಚ್ಯುತಿ ಬರದಂತೆ ಕಾವ್ಯ ರಚಿಸಿ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ.

ಕಟ್ಟುಪಾಡುಗಳಿಲ್ಲದೆ ಸಂಪೂರ್ಣ ಸ್ವತಂತ್ರವಾಗಿ ಪ್ರಕೃತಿ ವರ್ಣನೆ ಮಾಡಿರುವುದನ್ನು ಇಪ್ಪತ್ತನೆಯ ಶತಮಾನದ ನವೋದಯ ಸಾಹಿತ್ಯದಲ್ಲಿ ಕಾಣಬಹುದು. ಈ ಕಾಲ ಘಟ್ಟದಲ್ಲಿ ಕವಿಗಳು ಯಾವುದೇ ಲಾಕ್ಷಣಿಕರ ರಾಜ ಮಹಾರಾಜರ ಅಧೀನಕ್ಕೆ ಒಳಗಾಗದೆ ಸಂಪೂರ್ಣ ಸ್ವತಂತ್ರವಾಗಿ ಕಾವ್ಯವನ್ನು ರಚಿಸಿದ್ದಾರೆ. ಆ ಮೂಲಕ ತಮ್ಮ ಅನುಭವ ಅಭಿವ್ಯಕ್ತಿಗೆ ತಕ್ಕಂತೆ ಪ್ರಕೃತಿಯ ವರ್ಣನೆ ಮಾಡಿರುವುದನ್ನು ಕಾಣಬಹುದು. ಋತು ವರ್ಣನೆಯ ಸಂದರ್ಭದಲ್ಲಿ ವಸಂತ ಋತು, ಗ್ರೀಷ್ಮ ಋತು, ವರ್ಷ ಋತುವನ್ನು ಕುರಿತು ಕನ್ನಡ ಸಾಹಿತ್ಯದುದ್ದಕ್ಕೂ ಕವಿಗಳು ವರ್ಣಿಸಿರುವುದನ್ನು ಕಾಣಬಹುದು. ವರ್ಷ ಋತುವನ್ನು ಕುರಿತಂತೆ ಹೆಚ್ಚಿನ ವರ್ಣನೆಗಳನ್ನು ಕಾಣಬಹುದು. ವರ್ಷ ಋತು ಇದು ಮುಂಗಾರು ಮಳೆಯ ಕಾಲವಾಗಿದ್ದು ಕವಿಗಳ ಪ್ರೀತಿಗೆ ಪಾತ್ರವಾದ ಕಾಲವಾಗಿದೆ. ಮಳೆಯ ಭಾವ, ಭಂಗಿ ರುದ್ರ ರಮಣೀಯತೆಯನ್ನು ಕವಿಗಳು ಬಹಳ ಅಂದವಾಗಿ ವರ್ಣಿಸಿದ್ದಾರೆ.

"ಘುಡು ಘುಡು ಚಿಟಲೆಂದು
ಗ್ಗಡದ ಸಿಡಿಲ್ದನಿಯೆ ಪೊಡೆಯೆ ಗಗನ ಸ್ಥಲದಿಂ
ದುಡುಗಳ ಪಳಿಪಳಿನುದರ್ವವೊ
ಲೆಡೆವಿಡದಿಳೆವಾಲಿವರಲ ಮಳೆಬಗೆಗೊಳಿಕುಂ" – ಷಡಕ್ಷರಿ

ಇಡೀ ಪದ್ಯದಲ್ಲಿ ಮಳೆಯ ಪರಿಣಾಮ ಹೇಗಿದೆ ಎಂಬುದನ್ನು ಕಟ್ಟಿಕೊಡುತ್ತಾ ನಂತರ ಲಾಕ್ಷಣಿಕರ ಸಂಪ್ರದಾಯಕ್ಕೆ ಅನುಗುಣವಾಗಿ ಜಾತಕ ಪಕ್ಷಿಗಳ ಉಲ್ಲಾಸವನ್ನು ನವಿಲಿನ ನಾಟ್ಯವನ್ನು ವರ್ಣಿಸಿ ಅನಂತರ...

"ಜಳಮಯಮಿಳೆ ಜಳದ ಮಯಂ
ಜಳಧರ ಮಾರ್ಗಂ ತಟನ್ಮಯಂ ಧಿಗ್ವಳಯಂ
ಕಳೆಗೊಳ್ ನವಸೃಷ್ಟಿಯನೇಂ
ತಳೆದುದೊ ಭುವನಂ ಘನಾಗಮಾನಂಭುಜ ಭವನಿಂ"

ಜಳವೆಲ್ಲ ಧರೆಯ ತುಂಬ ಹಬ್ಬಿ ಕಾಂತಿ ಹೀನವಾಗಿದೆ ಎಂದಿದ್ದಾನೆ. ಹೀಗೆ ಮಳೆ ಬಂದ ಪರಿಣಾಮ ಪ್ರಕೃತಿಯ ಮೇಲೆ ಯಾವ ರೀತಿಯಲ್ಲಾಗಿದೆ ಎಂಬುದನ್ನು ಷಡಕ್ಷರಿ ಕವಿಯೂ ವಿವರಿಸುವ ಪ್ರಯತ್ನ ಮಾಡಿದ್ದಾನೆ. ಮಳೆಯನ್ನು ಕುರಿತು ಆಧುನಿಕ ಕನ್ನಡ ಕವಿಗಳು ವಿಭಿನ್ನವಾಗಿ ಕಾವ್ಯವನ್ನು ಸೃಷ್ಟಿಸಿದ್ದಾರೆ. ಮಳೆಯು ಇಡೀ ಪ್ರಕೃತಿಯ ಜೀವಾಳವಾಗಿದೆ. ಮಳೆ ಸಕಲ ಜೀವರಾಶಿಗಳ ಉಳಿವಿಗೆ ಸಹಕಾರಿ, ಮಳೆ ಇಲ್ಲದೆ ಹೋದರೆ ಜಗತ್ತಿನಲ್ಲಿ ಯಾವುದೇ ಪ್ರಾಣಿ ಸಂಕುಲವಾಗಲಿ ಸಸ್ಯ ಸಂಕುಲವಾಗಲಿ ಬದುಕುಳಿಯಲು ಸಾಧ್ಯವಿಲ್ಲ. ಜೀವಿ ಸಮತೋಲನಕ್ಕೆ ಹಾಗೂ ಜೀವದ ಉಗಮಕ್ಕೂ ಸಹ ವರ್ಷ ಋತು ಕಾರಣವಾಗಿದೆ. ಮಳೆಯೇ ಪ್ರತಿಯೊಂದು ಜೀವದ ಜೀವನಾಡಿಯಾಗಿದೆ. ಪ್ರತಿಯೊಂದು ಜೀವಿಯು ಆಹಾರವನ್ನು ಪಡೆಯಲು ಮಳೆಯು ಅತ್ಯವಶ್ಯಕವಾಗಿದೆ. ಮಳೆಯಿಲ್ಲದೆ ಯಾವುದೇ ಜೀವಿ ಆಹಾರವನ್ನು ತಯಾರಿಸಲು ಸಾಧ್ಯವಾಗುವುದಿಲ್ಲ. ಒಟ್ಟಾರೆ ಪರಿಸರ ಸಮತೋಲನಕ್ಕೆ ಮಳೆ ಅತ್ಯವಶ್ಯಕವಾಗಿದೆ.

ಮಳೆ ಕುರಿತ ಕವನಗಳನ್ನು ಅವಲೋಕಿಸಿದಾಗ ಮಳೆಯ ಪರಿಣಾಮ ಪ್ರಕೃತಿಯ ಮೇಲೆ ಬೀರಿರುವುದನ್ನು ನಾವು ಗುರುತಿಸಬಹುದು. ಮಳೆಯು ಪ್ರಕೃತಿಯ ಕೊಡುಗೆ. ಮಳೆಯಿಂದಲೆ ಪ್ರಕೃತಿ ಸುಂದರವಾಗಿದೆ. ಹೀಗೆ ಮಳೆ ಮತ್ತು ಪ್ರಕೃತಿಯ ಸಂಬಂಧ ಅನನ್ಯವಾಗಿದೆ. ಇಂತಹ ಅನ್ಯೋನ್ಯ ಸಂಬಂಧವು ಹೇಗಿದೆ ಹಾಗೂ ಮಳೆಯಿಂದ ಪ್ರಕೃತಿಯಲ್ಲಾದ ಬದಲಾವಣೆಗಳೇನು ಎಂಬುದನ್ನು ಕನ್ನಡ ಕವಿಗಳು ತಮ್ಮ ಕವನದಲ್ಲಿ ಕಟ್ಟಿಕೊಟ್ಟಿದ್ದಾರೆ. ಅದನ್ನು ಮುಂದಿನಂತೆ ವಿಸ್ತರಿಸಿಕೊಳ್ಳಬಹುದು.

ಕನ್ನಡ ಕಾವ್ಯದ ಶಬ್ದಗಾರುಡಿಗ ಎಂದು ಖ್ಯಾತರಾದ ಬೇಂದ್ರೆಯವರು ತಮ್ಮ ಕವನಗಳಲ್ಲಿ ಮಳೆ ಬಂದುದರ ಪರಿಣಾಮ ಪ್ರಕೃತಿಯ ಮೇಲೆ ಆಗಿರುವುದನ್ನು ಗುರುತಿಸಿದ್ದಾರೆ. ತಮ್ಮ 'ನಿಗಿನಿಗಿ ಮುಗಿಲು' ಎಂಬ ಕವನದಲ್ಲಿ ಮಳೆಯನ್ನು ಕುರಿತು ಬರೆಯುತ್ತಾ ಪ್ರಕೃತಿಯಲ್ಲಿ ಉಂಟುಮಾಡಿದ ಪರಿಣಾಮವನ್ನು ಈ ಕೆಳಗಿನಂತೆ ಗುರುತಿಸಿದ್ದಾರೆ.

"ಕಾಲೂರಿತು ಮಳೆ
ಕತ್ತೆತ್ತಿತು ಬೆಳೆ,
ಹನಿಯೊಡೆಯಿತು ಮೋಡ;
ಕಿಲಿಕಿಲಿ ಹಕ್ಕಿ
ಕುಲು ಕಲು ನಕ್ಕಿ!
ದಯೆಗರೆಯಿತು ನೋಡಾ!"

ಕಾಲೂರಿತು ಮಳೆ ಕತ್ತೆತ್ತಿತು ಬೆಳೆ, ಎಂದರೆ ಪ್ರಕೃತಿಯಲ್ಲಿ ಎಲ್ಲಾ ಗಿಡ ಮರಗಳು ಸಹ ಮಳೆಯಿಂದಲೇ ಬೆಳೆಯುತ್ತವೆಂದು ಹೇಳುತ್ತಾರೆ. ಪ್ರತಿಯೊಂದು ಜೀವಿಗಳಿಗೂ ಅವಶ್ಯಕವಾದಂತಹ ಆಹಾರ

ಉತ್ಪಾದನೆಯಾಗುವುದು ಮಳೆಯಿಂದಲೇ. ಮಳೆ ಬರದೆ ಹೋದರೆ ಆಹಾರ ಉತ್ಪಾದನೆ ಅಸಾಧ್ಯ. ಮಳೆ ಬಂದಿದ್ದೆ ಆದರೆ ಜಗತ್ತಿನ ಸಕಲ ಜೀವರಾಶಿಗಳಿಗೂ ಆಹಾರ ದೊರೆಯುತ್ತದೆ. ಅದಕ್ಕೆ ಪೂರಕವಾದ ಮಳೆ ಬಂದರೆ ಬೆಳೆ ತಲೆ ಎತ್ತಿ ನಿಲ್ಲಲು ಸಾಧ್ಯವೆಂಬ ಭಾವವಿದೆ. ಹನಿಯೊಡೆದು ಮೋಡ; ಕಿಲಿಕಿಲಿ ಹಕ್ಕಿ ಕುಲುಕುಲು ನಕ್ಕಿ ಎಂದರೆ ಹನಿಯೊಡೆದು ಮೋಡ ಮಳೆಯನ್ನು ತಂದರೆ ಹಕ್ಕಿ ಪಕ್ಷಿಗಳೆಲ್ಲ ಸಂತಸದಿಂದ ಕಿಲಿಕಿಲಿ ನಾದವನ್ನು ತರುತ್ತವೆ. ಕುಲುಕುಲು ನಕ್ಕಿ ಅಂದರೆ ಸಂತೋಷದಿಂದ ಹಾಡುತ್ತವೆ. ದಯೆಗರೆಯಿತು ನೋಡ ಎಂಬಲ್ಲಿ ಸಸ್ಯಗಳು ಬೆಳೆಯನ್ನು ಬೆಳೆಯುತ್ತವೆ. ಹಕ್ಕಿ ಪಕ್ಷಿಗಳೆಲ್ಲ ಆನಂದವಾಗುತ್ತವೆ. ಹಾಗೂ ಎಲ್ಲಕ್ಕೂ ಪ್ರಕೃತಿ ದಯೆ ತೋರಿತೆಂದು ಹೇಳುತ್ತಾರೆ. ಜೀವದೊಳಗಿನ ಪ್ರಖರತೆಯಂತೆಯೇ ಅದರಿಂದ ಬರಲಿರುವ ಕರುಣಾ ವರ್ಷದಲ್ಲಿಯೂ ರಮ್ಯತೆಯಿರುವಂತೆ ನಿಸರ್ಗದ ಋತುಮಾನದಲ್ಲಿಯೂ ರಮ್ಯತೆ ಇದೆ.

ಬೇಂದ್ರೆಯವರು ತಮ್ಮ 'ಮಳೆಗಾಲ' ಎಂಬ ಇನ್ನೊಂದು ಕವನದಲ್ಲಿ ಪ್ರಕೃತಿ ಮೇಲಿನ ಮಳೆಯ ಪರಿಣಾಮವನ್ನು ವಿಭನ್ನವಾಗಿ ವರ್ಣಿಸಿದ್ದಾರೆ.

"ಅಡಗಿದೆ ದೃಷ್ಟಿ
ಆದರು ಸುರಿಯುತ್ತದೆ ವೃಷ್ಟಿ!
ಮೋಡದ ಮೇಲ್ಮೋಡ
ತಿಳಿಯದು ಏನಿದೆಯೋ ಗೂಢ!"[೪]

ಅಡಗಿದೆ ದೃಷ್ಟಿ ಆದರೂ ಸುರಿಯುತ್ತದೆ ವೃಷ್ಟಿ! ಅಂದರೆ ಕಣ್ಣು ಕಾಣದಾಗಿದೆ. ಕತ್ತಲಾಗಿದೆ ಆದರೂ ಮಳೆ ಬರುತ್ತಿದೆ. ಅದು ಏನಿದೆ ಎಂದು ತಿಳಿಯಲು ಸಹ ಸಾಧ್ಯವಿಲ್ಲವೆನೋ ಎಂಬುದನ್ನು ಮೋಡದ ಮೇಲ್ಮೋಡ ತಿಳಿಯದು ಏನಿದೆಯೋ ಗೂಢ ಮಳೆಯ ಅಂತರಾಳದಲ್ಲಿ ಅಂತಂಹ ನಿಗೂಡ ಶಕ್ತಿ ಇದೆ ಎಂದಿದ್ದಾರೆ. ಮುಂದುವರೆದು...

"ಹಸಿರಿನ ಉಲ್ಲಾಸಕೆ ಮಿತಿಯಿಲ್ಲಾ
ಕೆಸರಿಗಿಲ್ಲ ಕೊರತಿ
ಪಾತರಗಿತ್ತಿಯು ಸುಳಿದಾಡುತ್ತದೆ
ಮನೆ ಹಿಡಿದಳು ಗರತಿ"[೫]

ಮೇಲಿನ ಕವನದಲ್ಲಿ ಬೇದ್ರೆಯವರು ಮಳೆ ಬಂದುದರ ಪರಿಣಾಮ ಎರಡು ರೀತಿಯಲ್ಲಿರುವುದನ್ನು ತಿಳಿಸಿದ್ದಾರೆ. ಹಸಿರಿನ ಉಲ್ಲಾಸಕೆ ಮಿತಿ ಇಲ್ಲ ಕೆಸರಿಗಿಲ್ಲ ಕೊರತಿ. ಎಂದರೆ ಮಳೆ ಬಂದ ಕಾರಣದಿಂದಾಗಿ ಎಲ್ಲ ಗಿಡ ಮರಗಳು ಹಸಿರಿನಿಂದ ತುಂಬಿವೆ. ಹಸಿರಿನ ಉಲ್ಲಾಸಕೆ ಮಿತಿಯೇ ಇಲ್ಲದಂತಾಗಿದೆ. ಅದೇ ರೀತಿ ಕೆಸರು ಸಹ ಎಲ್ಲಾ ಕಡೆಗೂ ಇದೆ. ಅದಕ್ಕೂ ಕೊರತೆ ಇಲ್ಲಾ ಎಂದಿದ್ದಾರೆ. ಪಾಚಿಯು ಎಲ್ಲಾ ಕಡೆ ಹರಡಿದೆ. ಮಳೆಯು ಹೆಣ್ಣು ಮಕ್ಕಳು ಹೊರಗೆ ಹೋಗಲು ಅವಕಾಶವಿಲ್ಲದಂತೆ ಮಾಡಿದೆ ಎಂಬುದನ್ನು ಹೇಳಿದ್ದಾರೆ.

ಮುಂದುವರೆದು...

"ಬಾನ್ ತುಂಬಿದೆ, ಕೆರೆ ತುಂಬಿದೆ
ಹೂ ತುಂಬಿದೆ ಬೇಲಿ
ನೀರಲದಲಿ ರಸ ತುಂಬಿದೆ,
ಮಿದುವಾಗಿದೆ ಜಾಲಿ"[೬]

ಮಳೆಯ ಪರಿಣಾಮವನ್ನು ತಿಳಿಸುತ್ತಾ ಮಳೆಯು ಹೇಗೆ ಬಾನನ್ನು ತುಂಬಿದೆ, ಕೆರೆಯನ್ನು ತುಂಬಿದೆ, ಬೇಲಿಯಲ್ಲಿ ಹೂವನ್ನು ತುಂಬಿದೆ. ಅಂದರೆ ಎಲ್ಲೆಡೆಯು ಚೆಲುವು ಆವರಿಸಿದೆ ಎಂಬುದನ್ನು ತಿಳಿಸಿದ್ದಾರೆ. ಕೆರೆಯಲ್ಲಿ ನೀರಿದ್ದರೆ ಮತ್ತು ಗಿಡದಲ್ಲಿ ಹೂವಿದ್ದರೆ ನೋಡಲು ಚೆಂದವಾಗಿರುತ್ತದೆ. ಇಂತಹ ಚೆಲುವನ್ನು ಮಳೆ ಮಾತ್ರ ತರಲು ಸಾಧ್ಯ. ಮಳೆಯಿಂದ ಜಾಲಿಯು ಸಹ ಮಿದುವಾಗಿದೆ ಎಂದಿದ್ದಾರೆ. ಪ್ರತಿ ಬಾರಿ ಮಳೆ

ಬಂದಾಗಲೂ ಅದು ಹೊಸದನ್ನು ತರುತ್ತದೆ. ಅದಕ್ಕಾಗಿ ನಿರೀಕ್ಷಿಸುವ ಜನತೆ ಇದೆ ಎಂಬುದನ್ನು ಸೂಚ್ಯವಾಗಿ ಹೇಳಿದ್ದಾರೆ. ನೀರಲದಲ್ಲಿ ರಸ ತುಂಬಿದೆ ಎಂದು ಹೇಳುತ್ತಾ ಈ ವರ್ಷ ಋತುವಿಗಾಗಿ ತಾನು ಕಾಯುತ್ತಿರುವೆನೆಂದು ಹೇಳಿದ್ದಾರೆ.

ಕುವೆಂಪು ಅವರು ತಮ್ಮ 'ವರ್ಷ ಭೈರವ' ಕವನದಲ್ಲಿ ಮಳೆಯ ಪರಿಣಾಮ ಪಕೃತಿಯ ಮೇಲಾಗಿರುವುದನ್ನು ಸೊಗಸಾಗಿ ವರ್ಣಿಸಿದ್ದಾರೆ. ಮಳೆಯ ಪರಿಣಾಮವು ಪಕೃತಿಯ ಮೇಲೆ ಶಿವನ ಉಗ್ರರೂಪವಾದ ಭೈರವನಂತೆ ಅತಿ ಭಯಂಕರವೆಂಬಂತೆ ಬರೆದಿದ್ದಾರೆ. ಕುವೆಂಪು ಅವರು ಮಳೆಯ ಪರಿಣಾಮ ಪ್ರಕೃತಿಯ ಮೇಲಾದುದನ್ನು ಭಿನ್ನವಾಗಿ ಕಟ್ಟಿಕೊಡುವ ಪ್ರಯತ್ನ ಮಾಡಿದ್ದಾರೆ ಎಂದೆನಿಸುತ್ತದೆ.

"ಕದ್ದಿಂಗಳು ಕಗ್ಗತ್ತಲು
ಕಾರ್ಗಾಲದ ರಾತ್ರಿ
ಸಿಡಿಲ್ಮಿಂಚಿಗೆ ನಡುಗುತ್ತದೆ
ಪರ್ವತ ವನಧಾತ್ರಿ
ತುದಿಯಿಲ್ಲದೆ ಮೊದಲಿಲ್ಲದೆ
ಹಿಡಿದಂಬರವನು ತಬ್ಬಿದೆ"[೭]

ಮಳೆಯ ಪರಿಣಾಮವನ್ನು ವಿವರಿಸುತ್ತಾ ಕಡುಕತ್ತಲೆಯ ಕಾರ್ಗಾಲದ ರಾತ್ರಿ ಎಂದರೆ ಅವನತಿಯ ಸೂಚನೆಯೆಂಬಂತೆ ಮಳೆ ಸುರಿಯುತ್ತದೆ. ಅದು ಧಾರಾಕಾರವಾದ ಮಳೆಯನ್ನು ಸುರಿಸುತ್ತಿದೆ. ಆ ಮಳೆ ಬರುವಾಗ ಅದರ ಸಿಡಿಲು ಮಿಂಚಿಗೆ ಪರ್ವತಗಳೆಲ್ಲವು ನಡುಗುತ್ತಿವೆ. ಅದು ಆಕಾಶ ಭೂಮಿಯ ತುದಿ ಯಾವುದು ಮೊದಲಾವುದು ಎಂಬುದನ್ನು ಸಹ ತಿಳಿಯಲು ಸಾಧ್ಯವಿಲ್ಲ. ಹೀಗೆ ಮಳೆಯ ಭೀಕರತೆಯನ್ನು ತಿಳಿಸಿ, ಮಳೆಯಿಂದ ಭೂಮಿ ಮತ್ತು ಆಕಾಶ ಎರಡೂ ತಬ್ಬಿಕೊಂಡಂತೆ ಕಾಣುತ್ತಿದೆ ಎಂದಿದ್ದಾರೆ.

ಮುಂದುವರಿದು...

"ಕಾದಂಬಿನಿ ರಾಶಿ
ನಿರ್ದಯ ಕಠಿನಾಘಾತದಿ
ಕುಂಬಿನಿಯನು ಅಪ್ಪಳಿಸಿದೆ
ಘೀಳಿಟ್ಟುರೆ ಘೋರೆನ್ನುತೆ
ಬಿರುಗಾಳಿಯೆ ಬೀಸಿ
ಹೊಂಬಳ್ಳಿಯು ಹೊಮ್ಮಿದವೊಲು
ಥಳ್ಳನೆ ಮುಗಿಲಂಚು
ಇರುಳಲಿ ಹಗಲಿಣಿಕಿದವೊಲು
ಹಾವ್ನಾಲಗೆ ಮಿಂಚು
ನೆಕ್ಕುತ್ತಲಿದೆ ಕತ್ತಲೆಯನು
ಕುಕ್ಕುತ್ತಿದೆ ಬುವಿಗಣ್ಣನು
ಮಿಂಚಕ್ಕಿಯ ಚಂಚು"![೮]

ಕಾದಂಬಿನಿ ರಾಶಿ ಎಂದರೆ ಭೀಕರವಾದ ಮಳೆಯು ಸುರಿಯತ್ತಿದೆ. ಅದರ ಸ್ವರೂಪ ಹೇಗಿದೆ ಎಂದರೆ ಮನಸ್ಸಿಗೆ ಆಘಾತವನ್ನು ನೀಡಿ ಭೂಮಿಯನ್ನು ಬಂದು ಅಪ್ಪಳಿಸುವಂತಿದೆ. ಗಾಳಿಯು ಸಹ ಬೀರುಗಾಳಿಯ ಸ್ವರೂಪವನ್ನು ಪಡೆದಿದೆ. ಮಿಂಚು ಸಹ ತೆಳ್ಳನೆ ಹಬ್ಬಿದೆ. ಅದು ಹೊಂಬಳ್ಳಿ ಹಬ್ಬಿದ ರೀತಿಯಲ್ಲಿ ಬೃಹದಾಕಾರವಾಗಿದೆ. ಮಿಂಚು ಹೇಗಿದೆಯೆಂದರೆ ನಡು ರಾತ್ರಿಯಲ್ಲಿ ಸೂರ್ಯನು ಮೂಡಿದಂತೆ ಜಗತ್ತೆಲ್ಲ ಬೆಳಗಿದಂತೆ ಕಾಣುತ್ತದೆ. ಅದನ್ನು ಹಾವೇ ಎಂದು ವರ್ಣಿಸಿದ್ದಾರೆ. ಮಿಂಚಿನ ತೇಜಸ್ಸು ಹಾವಿನ ನಾಲಿಗೆಯಂತೆ

ಕಾಣುತ್ತದೆ. ಈ ಮಿಂಚು ಇಡೀ ಭೂಮಿಯನ್ನು ಯಾವ ರೀತಿ ಆವರಿಸಿದೆ ಎಂಬುದನ್ನು ನೆಕ್ಕುತ್ತಲಿದೆ ಕುಕ್ಕುತ್ತಲಿದೆ ಬುವಿಣ್ಣನು ಮಿಂಚಕ್ಕಿಯ ಚಂಚು ಎಂದಿದ್ದಾರೆ. ಅಂದರೆ ಮಳೆಯು ಭೂಮಿಯ ಕಣ್ಣನ್ನು ಕುಕ್ಕುತ್ತಿದೆ ಹಕ್ಕಿ ಕುಕ್ಕಿದಂತೆ ಎಂದಿದ್ದಾರೆ.

ಮುಂದುವರೆದು...

"ಆಕಾಶವೆ ನೀರಾಯ್ತೆನೆ
ಸುರಿಯುತ್ತಿದೆ ಭೋರ್ಭೋರ್ಗರನೆ
ಮುಂಗಾರ್ಮಳೆ ಧಾರೆ"೯

ಎಂದರೆ ಮುಂಗಾರು ಮಳೆಯ ಭೋರ್ಗರೆತವು ಇಡೀ ಆಕಾಶವನ್ನೆ ನೀರಾನ್ನಾಗಿಸಿತೆನೋ ಎಂಬ ಭಾವನೆ ಕವಿಯಲ್ಲಿ ಮೂಡಿದೆ. ಮಳೆಯು ಸಾಕಷ್ಟು ಸುರಿಯುತ್ತಿದ್ದು ಮನಸ್ಸಿಗೆ ಆನಂದ ಮತ್ತು ಪರಿಣಾಮದ ಆತಂಕಗಳೆರಡನ್ನು ಸೃಷ್ಟಿಸಿದೆ ಎಂದು ಹೇಳುತ್ತಾರೆ.

ಮುಂದುವರೆದು...

"ಲಯ ಭೀಷಣ ಮಳೆ ಭೈರವ
ಮೈದೋರಲು ಮರೆಯಾಗಿದೆ
ಭಯದಲಿ ಶಶಿತಾರೆ"೧೦.

ಈ ಮುಂಗಾರು ಮಳೆಯನ್ನು ವರ್ಣಿಸುತ್ತಾ ಅದರ ಪರಿಣಾಮ ಎಷ್ಟರಮಟ್ಟಿಗೆ ಎಂದರೆ ದಿನನಿತ್ಯ ಕಾಣಿಸಿಕೊಳ್ಳುವ ಚಂದ್ರ ನಕ್ಷತ್ರಗಳು ಮಳೆಗೆ ಹೆದರಿ ತಮ್ಮ ಮುಖ ತೋರಿಸದಂತೆ ಮರೆಯಾಗಿವೆ ಎಂದು ಹೇಳುತ್ತಾರೆ. ಮಳೆಯನ್ನು ಭೈರವನೊಂದಿಗೆ ಸಮೀಕರಿಸಿ ಭೈರವ ನೃತ್ಯಕ್ಕೆ ಎಲ್ಲವೂ ನಾಶಹೊಂದುವಂತೆ ಮಳೆಯ ಭೋರ್ಗರೆತಕ್ಕೆ ಚಂದ್ರ ತಾರೆಗಳು ಸಹ ಭಯಗೊಂಡಿವೆ ಅವಿತುಕೊಂಡಿವೆ ಎಂದು ಹೇಳುತ್ತಾರೆ.

ಮುಂದುವರೆದು...

"ಲಯರುದ್ರನ ಜಯ ಡಿಂಡಿಮ
ಘನ ವಜ್ರದ ರಾವ
ಭವ ವಿಪ್ಲವಕರ ಭೈರವ
ವರ ತಾಂಡವ ಭಾವ!
ದಿಗ್ದಿಕ್ಕಿಗೆ ಅದೋ ಹೊಕ್ಕಿದೆ
ಕಾರ್ಮುಗಿಲಿನ ಕೇಶ!"೧೧

ಮಳೆ ಹೇಗೆ ಬರುತ್ತಿದೆ ಎಂದರೆ ಲಯವನ್ನು ಹಿಡಿದು ಬಾರಿಸುವ ರುದ್ರನ ಢಮರುಗದಂತೆ ಅದು ಪ್ರಳಯ ಕಾಲವನ್ನು ಸೃಷ್ಟಿಸಿ ಬರುತ್ತಿದೆ. ಹೇಗೆ ಭೈರವನು ಜಯವನ್ನು ಸಾಧಿಸಿದಾಗ ತನ್ನ ಢಮರನ್ನು ಬಾರಿಸುವನೋ ಅಂತೆಯೇ ಮಳೆ ಆವರಿಸಿದ ಮೇಲೆ ಎಲ್ಲವೂ ಒಳಗೊಳ್ಳುತ್ತವೆ, ಆವರಿಸುತ್ತದೆ ಎಂಬುದನ್ನು ಕವಿ ಸೂಚಿಸಿದ್ದಾರೆ. ಭೈರವನ ನೃತ್ಯದಂತೆ ಮಳೆ ತನ್ನ ವ್ಯಾಪಕತೆಯನ್ನು ಹರಡಿಕೊಂಡಿದೆ. ಅದು ದಿಕ್ಕುದಿಕ್ಕುಗಳಿಗೂ ಸಹ ಕಪ್ಪನೆಯ ಮುಗಿಲನ್ನು ಆವರಿಸಿದಂತೆ ಕಾಣುತ್ತದೆ. ಕೇವಲ ಆವರಿಸಿಲ್ಲ ಹೊಕ್ಕಿದೆ ಎಂದಿದ್ದಾರೆ. ಮುಂದುವರೆದು...

"ಸಿಡಲ್ಮಿಂಚಲಿ ಹೊಮ್ಮುತ್ತಿದೆ
ಮಳೆ ಭೈರವ ರೋಷ!
ಮಳೆ ಎಂಬುದು ಬರಿ ಸುಳ್ಳಿದು!
ಮಳೆಯಲ್ಲಿದು! ಮಳೆಯಲ್ಲಿದು
ಪ್ರಲಯದ ಆವೇಶ"೧೨

ಮಳೆ ಸುರಿಯುತ್ತಿದೆ. ಅದಕ್ಕೆ ಪ್ರತಿಯಾಗಿ ಸಿಡಿಲು ಮಿಂಚು ಹೊಮ್ಮುತ್ತಿವೆ. ಭೈರವನ ರೋಷ ಅಂದರೆ ಮಳೆಯ ಆವೇಷ ಮಿಂಚಿನ ರೀತಿಯಲ್ಲಿ ಹೊರ ಹೊಮ್ಮುತ್ತಿದೆ ಎಂದಿದ್ದಾರೆ. ಮಳೆ ಎಂಬುದಿದು ಬರಿ ಸುಳ್ಳಿದು ಇದು ಮಳೆಯಲ್ಲ ಪ್ರಳಯದ ಆವೇಶ ಎಂದಿದ್ದಾರೆ. ಇದು ಕೇವಲ ಮಳೆಯಲ್ಲ ಅದಕ್ಕೆ ಒಂದು ಅಗಮ್ಯವಾದ ಅತೀತವಾದ ಶಕ್ತಿಯಿದೆ. ಇದು ಪ್ರಳಯ ಕಾಲದ ಆವೇಶದಂತೆ ಸುರಿಯುತ್ತಿದೆ. ಒಟ್ಟಾರೆಯಾಗಿ ಮಳೆಯು ಇಡಿ ಪ್ರಕೃತಿಯ ಮೇಲೆ ಹೇಗೆ ಪರಿಣಾಮ ಬೀರಿದೆ ಎಂಬುದನ್ನು ತಿಳಿಸಿದ್ದಾರೆ. ಮಳೆಗೆ ಒಂದು ಅಗಮ್ಯವಾದಂತಹ ಶಕ್ತಿಯಿದೆ ಎಂಬುದು ಕುವೆಂಪು ಅವರ ಅಭಿಪ್ರಾಯವಾಗಿದೆ.

ಕಣವಿಯವರು ತಮ್ಮ 'ಋತು ಸಂಹಾರ' ಎಂಬ ಕವನದಲ್ಲಿ ಮಳೆಯ ಪರಿಣಾಮ ಪ್ರಕೃತಿಯ ಮೇಲೆ ಹೇಗಾಗಿದೆ ಎಂಬುದನ್ನು ಅರ್ಥಪೂರ್ಣವಾಗಿ ಕಟ್ಟಿಕೊಟ್ಟಿದ್ದಾರೆ. ಪ್ರಕೃತಿಗೆ ಚೈತನ್ಯದಾಯಕವಾಗಿ ಮಳೆ ಬಂದಿದೆ ಮತ್ತು ಅದು ಜಗದ ಕೊಳೆಯನ್ನೆಲ್ಲಾ ತೊಳೆದಿದೆ ಎಂಬುದನ್ನು ವಿವರಿಸುವ ಪ್ರಯತ್ನ ಮಾಡಿದ್ದಾರೆ. ಅದು ಈ ಮುಂದಿನಂತಿದೆ...

"ಬಂತು ಮಳೆ ಹನಿಹನಿಯಾಗಿ
ಜೀವ ವಾಹಿನಿಯಾಗಿ
ಭಾನ ಕೊಡುಗೈದೊರೆಗೆ ಇಳಿಯ ಋಣಿಯಾಗಿ"[೧೩]

ಕಣವಿಯವರು ಮಳೆಯು ಬಂತು, ಅದು ಮಳೆ ಹನಿಯಾಗಿ ಜೀವ ವಾಹಿನಿಯಾಗಿದೆ ಎಂದಿದ್ದಾರೆ. ಅಂದರೆ ಪ್ರತಿಯೊಂದು ಜೀವಿಯ ಸಂಚಲನಕ್ಕೆ ಕಾರಣವಾಗಿರುವುದು ಮಳೆ. ಸಸ್ಯಗಳು ಮಳೆಯನ್ನು ಆಶ್ರಯಿಸಿವೆ ಮತ್ತು ಮಳೆಯಿಂದ ನೀರನ್ನು ಪಡೆದು ಆಹಾರವನ್ನು ತಯಾರಿಸುತ್ತವೆ. ಅದನ್ನು ಇತರ ಜೀವಿಗಳು ಪಡೆದು ಬದುಕುತ್ತವೆ. ಹೀಗೆ ಎಲ್ಲಾ ಜೀವಿಗಳಿಗೂ ಮಳೆ ಜೀವ ವಾಹಿನಿಯಾಗಿದೆ ಎಂದಿದ್ದಾರೆ. ಈ ಮಳೆಯು ಆಕಾಶದ ಕೊಡುಗೈ ದೊರೆಗೆ ಇಳೆಯ ಋಣಿಯಾಗಿ ಬಂದಿದೆ ಎನ್ನುತ್ತಾರೆ.

"ಹಳ್ಳಹೊಳೆಯಾಗಿ ಹಾಡಿದವು ಜಲಪಾತವಾಗಿ
ಗಿಡಗಿಡದ ನೆತ್ತಿಯನು ಅಡರಿ ಕುಳಿತಿಹ ಜಗದ ಧೂಳು –ತೊಡೆದು
ಧಾರೆ ಎರೆಯುತ ಬಂದ ನವ ನೀರದ!
ಪುಲಕಗೊಂಡಳು ಪ್ರಕೃತಿ
ಹಸಿರುಟ್ಟು ಹೂವಿನಾರತಿಯೆತ್ತಿ ನಿಂತಿಹಳು
ಬಾನುದ್ದ ಬೆಳೆದಂತೆ ಜಗದ ಪ್ರೀತಿ!
ಒಸಗೆ ಯಾಯಿತು; ನರನ ಒಂದೊಂದು ಕೃತಿ ವಿಕೃತಿ
ಋತು–ಋತುವಿನೊಡನಿಂತು ಬೆಸುಗೆಯಾಗಿ"[೧೪]

ಹಳ್ಳ ಹೊಳೆ ಹರಡಿದವು ಜಲಪಾತವಾಗಿ ಎಂದರೆ ಮಳೆ ಬಂದರೆ ಮಾತ್ರ ಹಳ್ಳ ಹೊಳೆಗಳಿಗೆ ಜೀವ ಬಂದತಾಗುತ್ತದೆ. ಈ ಜೀವ ಸುಂದರ ಪ್ರಕೃತಿಯನ್ನು ನಿರ್ಮಿಸಲು ಸಹಕಾರಿಯಾಗುತ್ತದೆ. ಅವು ಜಲಪಾತಗಳನ್ನು ಸೃಷ್ಟಿಸುತ್ತವೆ ಎಂದಿದ್ದಾರೆ. ಮಳೆಯು ಬರುವುದು ಗಿಡಗಿಡದ ನೆತ್ತಿಯನ್ನು ಏರಿ ಕುಳಿತಿರುವಂತಹ ಜಗತ್ತಿನ ಧೂಳನ್ನು ತೊಳೆಯಲು ಮಳೆ ಅತ್ಯಾವಶ್ಯಕ. ಅದು ಸಸ್ಯ ಸಂಕುಲಕ್ಕೆ ಹೊಸ ಜೀವವನ್ನು ನೀಡುತ್ತದೆ. ಆ ಮೂಲಕ ಮಳೆ ಹೊಸ ನೀರನ್ನು ಪ್ರಕೃತಿಗೆ ನೀಡಿ ಪ್ರಕೃತಿಯನ್ನು ಪುಳಕಿತಗೊಳಿಸುತ್ತದೆ ಎಂದಿದ್ದಾರೆ. ಹೀಗೆ ಪುಲಕಿತಗೊಂಡ ಪ್ರಕೃತಿ ಹಸಿರುಟ್ಟುಕೊಳ್ಳುವುದು ಎಂದರೆ ಮಳೆ ಬಂದರೆ ಎಲ್ಲ ಸಸ್ಯರಾಶಿಗಳು ಚಿಗುರೊಡೆದು ಹಸಿರನ್ನು ಹೊದ್ದು ನಿಲ್ಲುತ್ತದೆ. ಹಾಗೂ ಪ್ರಕೃತಿಯ ಸೊಬಗನ್ನು ಹೆಚ್ಚಿಸುತ್ತವೆ. ಹೂವಿನ ಆರತಿಯನ್ನು ಎತ್ತಿದಂತೆ ಹೊಸ ಹೂವುಗಳನ್ನು ಬೆಸೆಯುತ್ತವೆ. ಮನುಷ್ಯನನ್ನು ಒಳಗೊಂಡಂತೆ ಪ್ರಕೃತಿಯು ಜೀವಕಾರುಣ್ಯಕ್ಕೆ ನಾಂದಿಯಾಗುತ್ತದೆ. ಇದು ಋತುಗಳ ನಡುವಿನ ಕೊಂಡಿಯಾಯಿತು ಎಂದಿದ್ದಾರೆ.

ಕಣವಿಯವರು ಋತು ಸಂಹಾರ ಕವನದಲ್ಲಿ ಮಳೆಯು ನಿಸರ್ಗ ಕ್ರಿಯೆಗೆ ಅನುಗುಣವಾಗಿ ಜೀವಸೃಷ್ಟಿಗೆ ಅತ್ಯಾವಶ್ಯಕ ಎಂಬುದನ್ನು ತುಂಬ ಸೂಕ್ಷ್ಮವಾಗಿ ಕಟ್ಟಿಕೊಟ್ಟಿದ್ದಾರೆ. ಮಳೆಯು ಹಳ್ಳ ಹೊಳೆ ಗಿಡ ಮರ ಮತ್ತು ಋತುಗಳಿಗೆ ಹೇಗೆ ಜೀವಕೊಂಡಿಯಾಗಿದೆ ಎಂಬುದನ್ನು ವಿವರಿಸಿದ್ದಾರೆ. ಪ್ರಕೃತಿಯು ಸಹ ಮಳೆಯಿಂದ ಹಸಿರುತೊಟ್ಟು ಹೂವಿನ ಆರತಿ ಎತ್ತಿ ಜಗತ್ತಿಗೆಲ್ಲಾ ಪ್ರೀತಿಯನ್ನು ಹಂಚಲು ಸಹಾಯಕವಾಗಿದೆ ಎಂದಿದ್ದಾರೆ. '

'ರತ್ನದೀಪ' ಎಂಬ ಕವನ ಸಂಕಲನದಲ್ಲಿ ಮಳೆಯನ್ನು ಕುರಿತಂತೆ ಬಸುಪಟ್ಟದ ಅವರು ಹೇಗೆ ಪ್ರಕೃತಿಯ ಮೇಲೆ ಪರಿಣಾಮ ಬೀರಿದೆ ಎಂಬುದನ್ನು ವಿವರಿಸಿದ್ದಾರೆ. ಮಳೆ ಬಂದಿದ್ದರಿಂದ ಭುವಿಯು ಸಂತಸಗೊಂಡಿತು. ಪ್ರಕೃತಿಯ ಒಡಲಿಗೆ ಆನಂದ ತಂದಿತೆಂದಿದ್ದಾರೆ. ಅದು ಈ ಮುಂದಿನಂತಿದೆ.

"ಮಳೆಯದು ಬಂದಿತು ಕಳೆಯನು ತಂದಿತು
ಇಳಿಯೊಳಗಿರುತಿಹ ಜೀವಕ್ಕೆಲ್ಲ
ನೀರಡಿಸಿದ ಬುವಿ ಸಂತಸಗೊಂಡಿತು
ಮಳೆಯದು ಸುರಿಯಲು ಸುತ್ತೆಲ್ಲ"[೧೫]

ಮಳೆಯು ಬಂದಿದ್ದೇ ಆದರೆ ಎಲ್ಲಾ ಜೀವರಾಶಿಗಳಿಗೂ ಸಂತೋಷವಾಗುತ್ತದೆ ಎಂಬುದನ್ನು ಹೇಳುತ್ತಾ ಎಲ್ಲಾ ಜೀವಗಳಲ್ಲೂ ನಗುವನ್ನು ತರುವ ಶಕ್ತಿ ಮಳೆಗಿದೆ. ಆದ ಕಾರಣ ಮಳೆ ಅವಶ್ಯಕವಾದುದಾಗಿದೆ ಎಂದಿದ್ದಾರೆ. ಮಳೆ ಬಂದರೆ ಭೂಮಿಗೂ ಸಹ ಸಂತೋಷವಾಗುತ್ತದೆ ಎಂದಿದ್ದಾರೆ.

ಮುಂದುವರೆದು...

"ಪ್ರಕೃತಿಯ ಒಡಲಿಗೆ ಮಳೆಯದು ತಂದಿತು
ನೂತನ ಚೇತನದುತ್ಸಾಹ
ಇಳಿಯ ರಂಗದಲಿ ಜೀವಕೋಟಿಗಳಿ
ಗಾಯಿತೀಗ ನಿಜ ಪ್ರೋತ್ಸಾಹ"[೧೬]

ಪ್ರಕೃತಿ ಮಳೆಯಿಂದ ಹೇಗೆ ಸಂತೋಷಗೊಂಡಿತು ಎಂಬುದನ್ನು ಬಹಳ ಸರಳವಾಗಿ ನೇರವಾಗಿ ಹೇಳುತ್ತಿದ್ದಾರೆ. ಹೊಸದಾದ ಚೇತನವನ್ನು ಉತ್ಸಾಹವನ್ನು ಪ್ರಕೃತಿಗೆ ಮಳೆ ತಂದಿತೆಂದು ಜಗತ್ತೆಂಬ ರಂಗದಲ್ಲಿ ಮಳೆ ಬಂದಾಕ್ಷಣ ಸಕಲ ಜೀವಕೋಟಿಗಳಿಗೂ ಆಯಿತು ನಿಜ ಪ್ರೋತ್ಸಾಹ ಎಂದಿದ್ದಾರೆ. ಮಳೆ ಮಾತ್ರವೆ ಪ್ರಕೃತಿಗೆ ಚೇತನದುತ್ಸಾಹವನ್ನು ಜೀವಿಗಳಿಗೆ ಜೀವನದ ಪ್ರೋತ್ಸಾಹವನ್ನು ತಂದುಕೊಡಬಲ್ಲುದು ಎಂಬುದು ಕವಿಯ ಭಾವವಾಗಿದೆ.

ಬಸುಪಟ್ಟದ ಅವರು ಒಟ್ಟಾರೆಯಾಗಿ ಮಳೆಯು ಪ್ರಕೃತಿಯ ಮೇಲೆ ಗಾಡವಾದ ಪರಿಣಾಮವನ್ನು ಬೀರಿದೆ ಎಂಬುದನ್ನು ನೇರ ನುಡಿಗಳ ಮೂಲಕ ತಿಳಿಸಿದ್ದಾರೆ. ಮಳೆಯು ಭೂಮಿಯ ಎಲ್ಲಾ ಜೀವಿಗಳಿಗೂ ಸಂತೋಷವನ್ನು ತಂದು ಸಕಲ ಜೀವಕೋಟಿಗಳಿಗೂ ನಿಜ ಪ್ರೋತ್ಸಾಹ ತಂದಿದೆ ಎಂದಿದ್ದಾರೆ. ಒಟ್ಟು ಪರಿಣಾಮ ಧನಾತ್ಮಕವಾಗಿದೆ.

ವಿ.ಕೃ. ಗೋಕಾಕ್ ಅವರು ಮಳೆಯ ಪರಿಣಾಮ ಪ್ರಕೃತಿಯ ಮೇಲಾಗಿರುವುದನ್ನು ಮತ್ತೊಂದು ರೀತಿಯಲ್ಲಿ ಪ್ರಸ್ತುತ ಪಡಿಸಿದ್ದಾರೆ. ಮಳೆ ಕೇವಲ ಮಳೆಯಲ್ಲ ಅದು ಜಗತ್ತಿಗೆಲ್ಲ ಹೊಸ ಸಂದೇಶವನ್ನು ನೀಡುವ ಸಂದೇಶ ವಾಹಕವಾಗಿದೆ. ಮಳೆ ಜಗಕ್ಕೆಲ್ಲ ಹೊಸತನವನ್ನು ತಂದುಕೊಡುತ್ತದೆ. ಮಳೆಯಿಂದ ಮಾತ್ರ ಜಗತ್ತಿನ ಎಲ್ಲರೂ ಆಹಾರವನ್ನು ಪಡೆಯುತ್ತಾರೆ. ಆ ಮೂಲಕ ಭೂಮಿಗೆ ಮನುಷ್ಯರಿಗೆ ಜೀವನಾಡಿಯಾಗಿದೆ ಎಂದಿದ್ದಾರೆ.

"ವರ್ಷಾಂಗಾನೆಯ ಮಿಂಚಿನ ಕುಣಿತಕೆ
ಸೋತಿತು ಹೃದಯ ಮಳೆಬಿಲ್ ಮಣಿತಕೆ

ಚಂಡ ಭಾಸ್ಕರನು ನೋಯಿಸಿದ
ನೆಲದೆದೆಯನು ರವಿ ಬೇಯಿಸಿದ
ನೊಂದ ನೆಲಕೆ ಮೊಳಗಿದ ಸಂಗೀತ
ಕರ್ಣ ಮಧುರ ಮೋಹಕ ಸಂಪ್ರೀತ
ನಂದನ ವನದಲ್ಲಿ ಹೂ ಸುರಿದಂತೆ
ಬಿಡುಗಣ್ಣರು ಹೂ ಮಳೆ ಕರೆದಂತೆ
ಗುಡುಗಿನ ಮುತ್ತಾತನು ತಂದಂತೆ
ಬತ್ತಾಸವ ಎಲ್ಲರು ತಿನಲೆಂದು"[೧೭]

ಗೋಕಾಕ್ ಅವರು ಮಳೆಯನ್ನು ವರ್ಷಾಂಗನೆ ಎಂದು ಕರೆದರು. ಆ ವರ್ಷಾಂಗನೆಯ ಕುಣಿತಕ್ಕೆ ಸೋತಿತು ಹೃದಯ ಎಂದರೆ ಆನಂದವನ್ನು ತಂದಿತು. ಮನಸ್ಸಿಗೆ ಸಂತೋಷವಾಯಿತು ಎಂದಿದ್ದಾರೆ. ಇದು ಅವರೊಬ್ಬರಿಗಲ್ಲ, ಸಕಲ ಜೀವಿಗಳಿಗೂ ಸಹ. ಮಳೆಬಿಲ್ಲನ್ನು ಕಂಡು ಮನಸ್ಸು ಆನಂದಗೊಂಡಿತೆಂದು ಹೇಳುತ್ತಾರೆ. ನೆಲದೆದೆಯನ್ನು ರವಿ ಬೇಯಿಸಿದ ಎಂದರೆ ಭೂಮಿಯು ಬಿಸಿಲಿನ ತಾಪದಿಂದ ಬಸವಳಿದಿದೆ. ಇದಕ್ಕೆ ಪ್ರತಿಯಾಗಿ ಮಳೆ ಬಂದು ಸಂಗೀತದೋಪಾದಿಯಲ್ಲಿ ಭೂಮಿಗೆ ಆನಂದವನ್ನು ನೀಡಿದೆ. ಕಣ್ಣಿಗೆ ಮೋಹಕವಾದ ನೋಟವನ್ನು ತಂದುಕೊಟ್ಟು ನಂದನ ವನದಲ್ಲಿ ಹೂಗಳು ಸುರಿದರೆ ಎಷ್ಟು ಚಂದವೋ ಆ ರೀತಿಯಲ್ಲಿ ಮನಸ್ಸಿಗೆ ಮುದ ನೀಡುತ್ತಿದೆ ಎಂದಿದ್ದಾರೆ. ಈ ಮಳೆಯು ತಾತ ತನ್ನವರು ಸಿಹಿಯನ್ನು ತಿನ್ನಲೆಂದು ತಂದ ಬತ್ತಾಸದಂತೆ ಬಂದು ಎಲ್ಲರಿಗೂ ಸಂತೋಷವನ್ನು ತಂದಿದೆ. ಗೋಕಾಕ್ ಅವರು ಮಳೆಯ ಪರಿಣಾಮ ಪ್ರಕೃತಿಯ ಮೇಲೆ ಹಲವು ರೀತಿಯಲ್ಲಾಗಿದೆ ಎಂಬುದನ್ನು ಹೇಳುತ್ತಾ, ಎಲ್ಲರನ್ನು ಸಂತೋಷಗೊಳಿಸಿ ಕಾದ ಭೂಮಿಯ ಒಡಲನ್ನು ತಣಿಸಿ ಸಿಹಿಯಾಗುವಂತೆ ಮಾಡಿದೆ. ಆ ಮೂಲಕ ಎಲ್ಲಾ ಜೀವರಾಶಿಗಳಿಗೂ ಆಹಾರವನ್ನು ಪಡೆಯಲು ಸಹಕಾರಿಯಾಗಿದೆ ಎಂದಿದ್ದಾರೆ. ಒಟ್ಟಾರೆಯಾಗಿ ಮಳೆಯು ಸಕಲ ಜೀವರಾಶಿಗಳಿಗೂ ಭೂಮಿಗೂ ಅವಶ್ಯಕ. ಮಳೆ ಬಂದು ಎಲ್ಲಾ ಜೀವಿಗಳನ್ನು ಭೂಮಿಯನ್ನು ತಣಿಸಿ ಜೀವನದ ಉತ್ಸಾಹಕ್ಕೆ ಪ್ರೋತ್ಸಾಹದಾಯಕವಾಗಿ ಬೆಳೆಸುತ್ತಿದೆ ಎಂಬುದನ್ನು ಸೂಕ್ಷ್ಮವಾಗಿ ಕಟ್ಟಿಕೊಟ್ಟಿದ್ದಾರೆ.

ಮಳೆ ಬಂದ ಪರಿಣಾಮ ಪ್ರಕೃತಿಯ ಮೇಲೆ ಹೇಗಾಗುತ್ತದೆಂಬುದಕ್ಕೆ ಭೈರೇಗೌಡ ಚಿಕ್ಕಮರಳಿಯವರು "ಮೋಡಗಳು" ಎಂಬ ಕವನ ಸಂಕಲನದಲ್ಲಿ ಭಿನ್ನ ರೀತಿಯಲ್ಲಿ ಅಭಿವ್ಯಕ್ತಪಡಿಸಿದ್ದಾರೆ.

"ಬಂದ ಮೋಡಗಳೆಲ್ಲ ಸುರಿಸುವುದಿಲ್ಲ ಹನಿ
ಆರ್ಭಟಿಸುವ ಬಿರುಮಳೆಗೆ ಸಿಲುಕಿ
ನಲುಗಿದೆ ಬನದ ಸಿರಿ
ಕೆಸರದ್ದಿ ಸುರುಟಿ ಒಣಗಿದೆ ಪಚ್ಚೆ
ಹಳ್ಳ ಕೊಳ್ಳ ಕಮರಿಗಳೆಲ್ಲ ಕೊಚ್ಚೆ
ವಿಕಾರವಾಗಿದೆ ನೆಲದ ಮೈ
ಸುಟ್ಟರೆಗೆ ತಿರುವಿ ಬಿರುಗಾಳಿಗೆ ತೂರಿ
ಮುಸಲಧಾರೆಗೆ ತಲೆಯೊಡ್ಡಿ
ಚಿಂದಿಯಾಗಿದೆ ಜೀವಜಾಲ"[೧೮]

ಮಳೆಯು ಬಂದಂತಹ ಪರಿಣಾಮ ಪ್ರಕೃತಿಯ ಮೇಲೆ ಹೇಗಾಗಿದೆ ಎಂಬುದನ್ನು ವಿಭಿನ್ನ ರೀತಿಯಲ್ಲಿ ಭೈರೆಗೌಡ ಚಿಕ್ಕಮರಳಿಯವರು ಗುರುತಿಸಿದ್ದಾರೆ. ಬಂದ ಮೊಡಗಳೆಲ್ಲ ಮಳೆಯನ್ನು ಸುರಿಸುವುದಿಲ್ಲ. ಆರ್ಭಟಿಸುವ ಬಿರುಮಳೆಗೆ ಸಿಲುಕಿ ನಲುಗಿದೆ ಬನಸಿರಿ ಎಂದರೆ ಭೀಕರತೆಗೆ ಇಡಿ ಅರಣ್ಯವೇ ನಲುಗಿ ಹೋಗಿದೆ ಎಂದಿದ್ದಾರೆ. ಮುಂದುವರೆದು ಕೆಸರದ್ದಿ ಸುರುಟಿ ಒಣಗಿದೆ ಪಚ್ಚೆ ಎಂದರೆ ಪಚ್ಚೆಕಲ್ಲು ಸಹ ತನ್ನ

ಹೊಳಪನ್ನು ಕಳೆದುಕೊಂಡಿದೆ ಎನ್ನುತ್ತಾರೆ. ಈ ಮಳೆಯ ಭೀಕರತೆ ಎಷ್ಟರ ಮಟ್ಟಿಗಿದೆ ಎಂದರೆ ಭೂಮಿಯೇ ಕೊಚ್ಚಿ ತನ್ನ ಸುಂದರ ರೂಪವನ್ನು ಕಳೆದುಕೊಂಡು ವಿಕಾರವಾಗಿದೆ. ಹಳ್ಳ-ಕೊಳ್ಳ ಕಮರಿಗಳು ಕೊಚ್ಚಿಹೋಗಿವೆ ಸುಟ್ಟುರೆಗೆ ತಿರುವಿ ಹೋಗಿದೆ. ಬಿರುಗಾಳಿಗೆ ಎಲ್ಲವು ಅಸ್ತವ್ಯಸ್ತವಾಗಿದೆ. ಎಂದಿದ್ದಾರೆ. ಮಳೆಯಿಂದಾಗಿ ಇಡೀ ಜೀವಜಾಲವೇ ಚಿಂದಿಯಾಗಿ ಹೋಗಿದೆ. ತನ್ನ ಜೀವನದ ಅಸ್ತಿತ್ವವನ್ನು ಕಳೆದುಕೊಂಡಿದೆ. ಜೀವಜಾಲದ ಬದುಕಿನಲ್ಲಿ ಬದಲಾವಣೆ ಋಣಾತ್ಮಕವಾಗಿದೆ. ಮಳೆಗೆ ತೆರೆದುಕೊಂಡ ಜೀವನವೇ ನಾಶದ ಸ್ಥಿತಿ ತಲುಪಿದೆ ಎಂದಿದ್ದಾರೆ.

ಮಳೆ ಬಂದ ಪರಿಣಾಮ ಪ್ರಕೃತಿಯ ಮೇಲೆ ಭಿನ್ನವಾಗಿದೆ ಎಂಬುದನ್ನು ಹೇಳುತ್ತಾ ಮಳೆಯ ಸ್ವರೂಪ ಹೇಗೆ ಭಿನ್ನ ಎಂಬುದನ್ನು ತಿಳಿಸಿದ್ದಾರೆ. ಮಳೆ ಪಚ್ಚೆ ಕಲ್ಲನ್ನು ಕಳೆಗುಂದುವಂತೆ ಮಾಡಿದೆ. ಹಳ್ಳ ಕೊಳ್ಳದ ಸ್ವರೂಪ ಬದಲಿಸಿದೆ. ಆ ಮೂಲಕ ನೆಲದ ಮೈ ಸುಂದರವಾಗಿದ್ದುದನ್ನು ವಿಕಾರವಾಗಿಸಿದೆ ಎಂದಿದ್ದಾರೆ. ಹಾಗೂ ಜನ ಜೀವನ ಮಳೆಯಿಂದ ಅಸ್ತವ್ಯಸ್ತವಾಗಿದೆ. ಮಳೆ ಕೇವಲ ಜೀವನೋತ್ಸಾಹದ ರೂಪಕವಾಗಿರದೆ ಜೀವನದ ನಾಶಕ್ಕೂ ಕಾರಣವಾಗಿದೆ. ಎಂಬುದನ್ನು ತಿಳಿಸುವ ಪ್ರಯತ್ನ ಮಾಡಿದ್ದಾರೆ. ಒಟ್ಟಾರೆ ಮಳೆಯ ಪರಿಣಾಮ ಇಂದಿನ ಜೀವಜಾಲದ ಮೇಲೆ ಬೀರುವ ಪರಿಣಾಮವನ್ನು ಕುರಿತು ತಿಳಿಸಿದ್ದಾರೆ. ಹೇಗೆ ಜೀವನವನ್ನು ಹಾಳು ಮಾಡುತ್ತದೆ ಮಳೆ ಎಂಬುದನ್ನು ತಿಳಿಸುತ್ತಾ ಜೀವಜಾಲವೇ ಚಿಂದಿಯಾಗಿದೆ ಎನ್ನುತ್ತಾ ವಾಸ್ತವತೆಯ ರೂಪವನ್ನು ತೆರೆದಿಡುವ ಪ್ರಯತ್ನ ಮಾಡಿದ್ದಾರೆ.

ಇತ್ತೀಚಿನ ಕವಿಗಳಲ್ಲಿ ಒಬ್ಬರಾದ ನಾಗಣ್ಣ ಕಿಲಾರಿಯವರು ಮಳೆಯನ್ನು ಕುರಿತಂತೆ "ತಪಸ್ಸಿಗಿಳಿದ ಮಳೆ" ಎಂಬ ಕವನ ಸಂಕಲನದ "ಮೋಡಗಳು" ಎಂಬ ಕವನದಲ್ಲಿ ಮಳೆಯ ಪರಿಣಾಮ ಪ್ರಕೃತಿಯ ಮೇಲಾದುದನ್ನು ಇನ್ನೊಂದು ರೀತಿಯಲ್ಲಿ ಅಭಿವ್ಯಕ್ತಿಸಿದ್ದಾರೆ.

"ನೀಲಿ ಬಾಲೇ ಚಿಗುರು ಹುಲ್ಲು
ಮೋಡವೆ ಎಳೆ ಕರುವಾಗಿ
ಮೆಯ್ಯುತ್ತಿರುವುದು
ಕಪ್ಪು ಬಿಳುಪು ಮಿಂಚು ಬಣ್ಣ
ಹಂಡ ಬಂಡದ ಕರುವಾಗಿ
ಗಾಳಿಯೊಡನೆ ಚಕ್ಕಂದವಾಡುತ್ತಿವೆ
ಗುಡ್ಡ ಬೆಟ್ಟದ ಮಧ್ಯದಲೊಂದು
ದಟ್ಟವರವಾಗಿ ಕಾಣುವುದು"[೧೯].

ನೀಲಿಯಾದ ಆಕಾಶವನ್ನೇ ಹಸಿರಿನಿಂದ ಕೂಡಿದ ಎಳೆಯ ಹುಲ್ಲಿಗೆ ಹೋಲಿಸಿ ಅದನ್ನು ಮೇಯ್ಯಲು ಮಳೆಯ ಮೋಡ ಬರುತ್ತಿದೆ ಎಂಬ ಕವಿಯ ರೂಪಕ ಸುಂದರವಾಗಿದೆ. ಇಲ್ಲಿ ಕಪ್ಪು ಬಿಳುಪು ಮಿಂಚು ಬಣ್ಣದ ಹಂಡ ಬಂಡದ ಕರುವಾಗಿ ಗಾಳಿಯೊಡನೆ ಚಕ್ಕಂದವಾಡುತ್ತದೆ. ಎಂದರೆ ಮೋಡವನ್ನು ಕರುವಿಗೆ ಹೋಲಿಸಿ ಅದು ಗಾಳಿಯೊಂದಿಗೆ ಚಕ್ಕಂದವಾಡುತ್ತಿದೆ. ಅದು ಗುಡ್ಡ ಬೆಟ್ಟದ ಮೇಲೊಂದು ದೊಡ್ಡ ಮರವಾಗಿ ಕಾಣುತ್ತಿದೆ ಎಂದಿದ್ದಾರೆ. ಮಳೆಯ ಮೋಡದಂತೆ ಕಂಡು ಪ್ರಕೃತಿಯ ರೂಪ ಪಡೆದಿದೆ ಎಂದಿದ್ದಾರೆ.

ಹೊಸಗನ್ನಡ ಸಾಹಿತ್ಯದ ಆರಂಭದ ಕವಿಗಳಲ್ಲಿ ಒಬ್ಬರಾದ ಎಸ್. ಜಿ. ನರಸಿಂಹಚಾರ್ ಅವರು 'ಮಳೆಗಾಲ'ವೆಂಬ ಕವನದಲ್ಲಿ ಮಳೆಯು ಪ್ರಕೃತಿಯ ಮೇಲೆ ಬೀರಿದ ಪರಿಣಾಮವನ್ನು ಕುರಿತು ವರ್ಣಿಸುವ ಪ್ರಯತ್ನ ಮಾಡಿದ್ದಾರೆ.

"ಮಳೆಗಾಲದೊಳು ಬೀಜ
ಗಳು ಮೊಳಕೆಯಾಗುವವು
ಬೆಳೆಯುವುವು ಹುಲ್ಲುಗಳು ಸಸಿಗಳೆಲ್ಲಾ

ಇಳೆಯ ಗಿಡ ಮರಬಳ್ಳಿ
ಗಳು ಚಿಗುರಿ ಹೂವಾಗಿ
ಫಲಿಸುವುವು ಕೆರೆಕಟ್ಟೆ ತುಂಬುತಿಹುವು
ಓಡುವುದು ಲೋಕವನು
ಪೀಡಿಸುವ ಬೇಸುಗೆಯು
ಮಾಡುವುದು ಸಂತೋಷ ಜನರಿಗೆಲ್ಲ"[೨೦]

ಮಳೆಗಾಲದಲ್ಲಿ ಮಳೆ ಬಂದರೆ ಮಾತ್ರ ಬೀಜಗಳೆಲ್ಲ ಮೊಳೆತು ಸಸಿಯಾಗುವವು ಬೆಳೆಯುವವು. ಹುಲ್ಲು ಭೂಮಿಯ ಮೇಲಿನ ಗಿಡ ಮರ ಬಳ್ಳಿಗಳು ಚಿಗುರಿ ಹೂವಾಗುತ್ತವೆ. ಪ್ರಕೃತಿಯಲ್ಲಿನ ಎಲ್ಲಾ ಸಸ್ಯರಾಶಿಗಳು ಜೀವ ಕಳೆಯನ್ನು ತುಂಬಿಕೊಳ್ಳುತ್ತವೆ. ಆ ಮೂಲಕ ಫಲವಂತಿಕೆಯನ್ನು ಪಡೆಯುತ್ತವೆ ಎಂದಿದ್ದಾರೆ. ಮಳೆಯಿಂದಾಗಿಯೇ ಕೆರೆ ಕಟ್ಟೆಗಳು ತುಂಬುತ್ತವೆ ಲೋಕವನ್ನು ಮತ್ತೊಂದೆಡೆಗೆ ಕರೆದೊಯ್ಯುತ್ತದೆ. ಆ ಮೂಲಕ ಬೇಸಿಗೆಯಿಂದ ವಿಮುಕ್ತಿಗೊಳಿಸಿ ಜನರಿಗೆಲ್ಲಾ ಸಂತೋಷವನ್ನು ತಂದುಕೊಡುತ್ತದೆ ಎಂದಿದ್ದಾರೆ. ಮಳೆಯು ಸಸ್ಯ ಮತ್ತು ಪ್ರಾಣಿಗಳಲ್ಲಿ ಜೀವ ಚೇತನವನ್ನು ತರುತ್ತದೆ. ಆ ಮೂಲಕ ಮನುಷ್ಯನಿಗೆ ಪ್ರಕೃತಿಗೆ ಎರಡಕ್ಕೂ ಆನಂದವನ್ನು ಉಂಟುಮಾಡುತ್ತದೆ.

ಮುಂದುವರೆದು...

"ಕೂಡಿ ನವಿಲುಗಳೆಲ್ಲ
ನಾಡೆ ಗರಿಗಳ ಕೆದರಿ
ಪಾಡಿ ಕುಣಿತಿಹವು ವನಗಳಲ್ಲಿ
ಮಳೆಯೊಳಗೆ ಮುಂಗಾರಿ
ನೊಣಗಾಲಿ ಕಲ್ಲುಗಳು
ಫಳ ಫಳನೆ ಸುರಿಯುವುವು ಗುಡುಗುತಿಹುದು
ಸುಳಿಯುವುದು ಬಿರುಗಾಳಿ
ತೊಳಗುವುದು ಕುಡಿ ಮಿಂಚು
ಛಳಿಲೆಂದು ಬೀಳುವುದು ಸಿಡಿಲು ಧರೆಗೆ"[೨೧]

ಮಳೆ ಬಂದ ಸಂತೋಷವು ಹೇಗೆ ಪಕ್ಷಿಗಳಲ್ಲಿಯು ಹರಡಿದೆ ಎಂಬುದನ್ನು ತಿಳಿಸುತ್ತಾ, ಎಲ್ಲಾ ನವಿಲುಗಳು ಸಹ ಕೂಡಿ ನಾಡೆಗರಿಗಳ ಕೆದರಿ ಮಯೂರ ನೃತ್ಯವನ್ನು ಮಾಡುತ್ತಿವೆ. ಆ ಮೂಲಕ ಹೊಸ ಕಾಲದ ಹೊಸ ಸೃಷ್ಟಿಗೆ ಅಣಿಯಾಗುತ್ತಿವೆ ಮತ್ತು ಸಂತೋಷದಿಂದ ಹಾಡಿ ಕುಣಿಯುತ್ತಿವೆ. ಕಾಡಿನ ತುಂಬ ನರ್ತಿಸುತ್ತಿವೆ. ಮಳೆಯ ಆಲಿ ಕಲ್ಲುಗಳು ಸಹ ಬೀಳುತ್ತಿವೆ. ಮಳೆ ಬರುವ ಸಂದರ್ಭದಲ್ಲಿ ಗಾಳಿಯು ಸಹ ಬೀಸುತ್ತದೆ. ಅಲ್ಲದೆ ಸಿಡಿಲು ಮತ್ತು ಮಿಂಚು ಭೂಮಿಗೆ ತಾಗುತ್ತವೆ ಎಂದಿದ್ದಾರೆ. ಮಳೆ ಬರುವಾಗ ಕಾಡಿನ ಪ್ರಾಣಿಪಕ್ಷಿಗಳು ಅರಣ್ಯಗಳ ಸಕಲ ಜೀವರಾಶಿಗಳು ಸಹ ಸಂತೋಷಗೊಳ್ಳುತ್ತವೆ. ಮಳೆ ಬಂದಿದ್ದರಿಂದ ಇಡೀ ಪ್ರಕೃತಿಯಲ್ಲಿ ಉಂಟಾದ ಬದಲಾವಣೆಗಳನ್ನು ಕಟ್ಟಿಕೊಡುವ ಪ್ರಯತ್ನ ಮಾಡಿದ್ದಾರೆ. ಎಸ್. ಜಿ. ನರಸಿಂಹಚಾರ್ಯ ಅವರು ತಮ್ಮ ಮಳೆಗಾಲ ಕವನದ ಮೂಲಕ ಮಳೆಯ ಪರಿಣಾಮದ ಒಟ್ಟು ಸ್ವರೂಪವೇನೆಂಬುದನ್ನು ತಿಳಿಸುತ್ತಾ ಮಳೆ ಹೇಗೆ ಎಲ್ಲಾ ಜೀವಿಗಳಿಗೂ ದಾರಿದೀಪವಾಗಿದೆ ಎಂಬುದನ್ನು ತಿಳಿಸುತ್ತಾರೆ. ಜೊತೆಗೆ ಮಳೆಯ ಸ್ವರೂಪವನ್ನು ವಿವರಿಸುವ ಪ್ರಯತ್ನ ಮಾಡಿದ್ದಾರೆ.

ಡಿ. ಲಿಂಗಯ್ಯನವರು ತಮ್ಮ 'ವಚನ ದವನ' ಎಂಬ ಕೃತಿಯಲ್ಲಿ ಮಳೆಯನ್ನು ಕುರಿತಂತೆ ಅನೇಕ ವಚನಗಳನ್ನು ರಚಿಸಿದ್ದಾರೆ. ಅದರಲ್ಲಿ ಪ್ರಕೃತಿಯ ಮೇಲಿನ ಪರಿಣಾಮವನ್ನು ಭಿನ್ನ ರೀತಿಯಲ್ಲಿ ಹೇಳಿದ ವಚನವೊಂದನ್ನು ನೋಡುವುದಾದರೆ...

"ಬೆಂದ ಒಡಲಿಗೆ ಅಮೃತದ ತಂಪನೆರೆಯುವುದು
ಸಂದಣಿಸಿ ಸಂಭ್ರಮಿಸಿ ಬರುವ ಮುಂಗಾರು ಮಳೆ
ತಣ್ಣೀರು ಜಳಕದಲಿ ತೊಯ್ದು ಮಿಂದೇಳುವುದು
ಸಂತೃಪ್ತಿ ಸಂತಸದ ಸೌಗಂಧದ ನಿರಿಯಿಳೆ"[೨೧]

ಬಿಸಿಲಿನಿಂದ ಕಾದಂತಹ ಭೂಮಿಯ ಒಡಲಿಗೆ ಅಮೃತದ ತಂಪನೆರೆಯುವುದು. ಕಾಯಿಸಿ ಬಂದರೂ ಸಂಭ್ರಮಿಸಿ ಬರುವುದು. ಮಳೆಯು ಬರುವಾಗ ಸಂತೊಷದಿಂದ ಬರುವುದು. ಭೂಮಿಯು ತಣ್ಣೀರಿನ ಜಳಕದಿಂದ ತೊಯ್ದು ಮಿಂದೇಳುವುದು. ಅದು ಸೌಗಂಧವನ್ನು ಹೊರಸೂಸುವುದು ಎಂದಿದ್ದಾರೆ. ಅಂದರೆ ಬಿಸಿಲಿನ ಬೇಗೆಯಿಂದ ಬಳಲಿದ ಭೂಮಿಗೆ ಮತ್ತು ಭೂಮಿಯಲ್ಲಿನ ಜೀವರಾಶಿಗಳಿಗೆ ಮಳೆ ಜೀವದ ಸೆಲೆಯಾಗಿದೆ. ಅದು ಅಮೃತವನ್ನೇ ತಂದುಕೊಟ್ಟಂತಾಗಿದೆ. ಪ್ರಕೃತಿಯ ಜೀವ ಉಳಿಸುವ ಮತ್ತು ಜೀವಗಳಿಗೆ ಜೀವನವನ್ನು ಒದಗಿಸುವುದು ಎಂಬ ಅಭಿಪ್ರಾಯವಿದೆ. ಭೂಮಿಯು ಮಳೆಯಿಂದ ಜಳಕ ಮಾಡುವುದು. ಆ ಮೂಲಕ ಸ್ವಚ್ಛವಾಗಿ ಸುಗಂಧವನ್ನು ಸೂಸುವುದು. ಮಣ್ಣಿನ ವಾಸನೆ ಮಳೆ ಬಂದ ಸಂದರ್ಭದಲ್ಲಿ ಸೌಗಂಧದಂತೆ ಕಂಪನ್ನು ಹರಡುವುದು ಎಂದಿದ್ದಾರೆ.

ಮಳೆ ಬಂದಿದ್ದರ ಪರಿಣಾಮ ಪ್ರಕೃತಿಯ ಮೇಲಾಗುವುದನ್ನು ತಿಳಿಸುತ್ತಾ ಪ್ರಕೃತಿಯ ಕೊಡುಗೆಯಾದ ಮಳೆಯು ಸಹ ಸಂಭ್ರಮಿಸುತ್ತಾ ಬರುವುದೆಂಬ ಹೊಸ ಅಭಿಪ್ರಾಯವನ್ನು ಮಂಡಿಸಿದ್ದಾರೆ. ಒಟ್ಟಾರೆ ಮಳೆ ಪ್ರಕೃತಿಗೆ ಅವಶ್ಯಕ ಅಂತೆಯೇ ಚೈತನ್ಯವನ್ನು ತರುವುದೆಂದಿದ್ದಾರೆ.

ಮುಂದುವರೆದು...

"ಧೋ ಎಂದು ಮಳೆ ಸುರಿಯುವಾಗ ಸರ್ವನಾಶದ ಭಯ
ಭವಿಷ್ಯ ಕತ್ತಲಮಯ ಬದುಕಿನ ಬುನಾದಿಗಪಾಯ
ಮಳೆ ನಿಂತು ತಿಳಿಯಾದಾಗ ಪ್ರಕೃತಿಯ ಚೆಲುವಿಗೆ ಮೆರಗು
ಬದುಕಿಗೆ ಹೊಸಕಳೆ, ಇನ್ನಿಲ್ಲದ ಉತ್ಸಾಹ,ಜೀವಚಕ್ರದ ಚಲನೆ
ಪ್ರಕೃತಿಯ ವಿಸ್ಮಯಕೆ ಮಿಗಿಲಿಲ್ಲ"[೨೨]

ಮಳೆಯು ಬರುವಾಗ ಯಾವ ಯಾವ ರೀತಿಯ ಪರಿಣಾಮವನ್ನು ಪ್ರಕೃತಿಯ ಮೇಲೆ ಬೀರುತ್ತದೆ ಎಂಬುದನ್ನು ವಿವರಿಸುತ್ತಾ ಮಳೆ ಬರುವಾಗ ಭವಿಷ್ಯ ಕತ್ತಲಾಗಿರುತ್ತದೆ, ಬದುಕಿನ ಬುನಾದಿಗೆ ಅಪಾಯವನ್ನು ತಂದೊಡ್ಡಿರುತ್ತದೆ. ಅಂದರೆ ಸಂಕ್ರಮಣ ಸ್ಥಿತಿಯಲ್ಲಿ ಮನುಷ್ಯ ಮತ್ತು ಪ್ರಕೃತಿ ಇರುತ್ತದೆ. ಪ್ರಕೃತಿಯು ಸಹ ಹೊಸ ಹುಟ್ಟನ್ನು ಪಡೆಯುವಲ್ಲಿನ ತೊಂದರೆ ಮತ್ತು ಬುನಾದಿಗೆ ಅಪಾಯವನ್ನು ತಂದ್ದೊಡ್ಡುತ್ತದೆ ಎಂದಿರುವರು. ಜೋರಾದ ಮುಂಗಾರು ಮಳೆ ಸುರಿಯುವಾಗ ಎಲ್ಲವೂ ನಾಶ ಹೊಂದುವುದೆಂಬ ಭಯ ಕಾಡುತ್ತದೆ. ಮುಂದುವರಿದು ಮಳೆ ನಿಂತು ತಿಳಿಯಾದಾಗ ಪ್ರಕೃತಿಯ ಚೆಲುವಿಗೆ ಮೆರುಗು ಎಂದಿದ್ದಾರೆ. ಪ್ರಕೃತಿ ನಿಜವಾಗಿಯು ಸುಂದರವಾಗುವುದು ಅಥವಾ ಅದರ ಸೌಂದರ್ಯಕ್ಕೆ ಮೆರುಗು ಬರುವುದು ಮಳೆ ಬಂದಾಗಲೇ. ಜೊತೆಗೆ ಮನುಷ್ಯನ ಬದುಕಿಗೆ ಹೊಸ ಕಳೆಯನ್ನು ತರುತ್ತದೆ. ಅದು ಕೇವಲ ಹೊಸ ಕಳೆಯಲ್ಲ. ಇದುವರೆಗೂ ಕಾಣದಂತಹ ಹೊಸ ಉತ್ಸಾಹ ಮೂಡಿಬರುತ್ತದೆ. ಇದು ಜೀವ ಚಕ್ರದ ಚಲನೆ. ಇದು ಪ್ರಕೃತಿಯ ಕೊಡುಗೆ. ಇಂತಹ ಕೊಡುಗೆಯನ್ನು ಪ್ರಕೃತಿ ಕೊಡುತ್ತಲೆ ಇದೆ. ಇಂತಹ ಪ್ರಕೃತಿಯ ವಿಸ್ಮಯಕ್ಕೆ ಮಿಗಿಲಾದ ಶಕ್ತಿ ಯಾವುದೂ ಇಲ್ಲ ಎಂದಿದ್ದಾರೆ.

ಒಟ್ಟಾರೆಯಾಗಿ ಲಿಂಗಯ್ಯನವರು ತಮ್ಮ ಕವನದಲ್ಲಿ ಪ್ರಕೃತಿಯ ಮೇಲೆ ಮಳೆ ಮತ್ತು ಮಳೆಯಿಂದ ಪ್ರಕೃತಿಯ ಚಿತ್ರಣಗಳನ್ನು ಕಂಡುಕೊಳ್ಳುವ ಪ್ರಯತ್ನ ಮಾಡಿದ್ದಾರೆ. ಮಳೆ ಬರುವ ಸಂದರ್ಭ ಪ್ರಕೃತಿಯ ನಾಶವೆಂದು ಅನಿಸುತ್ತದೆ. ಮಳೆ ನಿಂತ ನಂತರ ಇಡೀ ಪ್ರಕೃತಿಯ ಚೆಲುವಿಗೆ ಮಳೆ ಕಾರಣವಾಗಿರುತ್ತದೆ. ಬದುಕಿಗೆ ಹೊಸ ಕಳೆಯನ್ನು ತಂದು ಯಾರಿಂದಲೂ ನೀಡಲಾಗದಂತಹ ಉತ್ಸಾಹ ಜೀವಚಕ್ರದ ಚಲನೆಗೆ

ಅವಕಾಶ ಕಲ್ಪಿಸುತ್ತದೆ. ಪ್ರಕೃತಿ ಕೊಡುಗೆಯಾದ ಮಳೆಯಿಂದ ಪ್ರಕೃತಿಯ ಸೌಂದರ್ಯಕ್ಕೆ ಮೆರುಗು ಬರುತ್ತದೆ ಎಂಬುದನ್ನು ಕಟ್ಟಿಕೊಡುವ ಪ್ರಯತ್ನ ಮಾಡಿದ್ದಾರೆ.

ದ.ರಾ. ಬೇಂದ್ರೆ ಅವರು ತಮ್ಮ ಮತ್ತೊಂದು ಕವನದಲ್ಲಿ ಶ್ರಾವಣದ ವರ್ಣನೆಯನ್ನು ಮಾಡುತ್ತಾ ಮಳೆ ಬಂದರೆ ಇಡೀ ಭೂ ಮಂಡಲವೆ ತಂಪಾಗಿ ತಂಪಾದ ಗಾಳಿ ಬೀಸುವುದು. ಎಲ್ಲಾ ಹಕ್ಕಿಗಳು ಸಹ ಸಾಲಾಗಿ ಹಾರಾಡುತ್ತವೆ. ಮೀನು, ಮೊಸಳೆ, ಮಿಂಚುಹುಳುಗಳ ಬಳಗವೂ ಕೂಡ ಪ್ರಕೃತಿಯಲ್ಲಿ ಸಂತೋಷವಾಗಿ ಜೀವಿಸಲು ಸಾಧ್ಯ ಎಂದು ಮುಂದುವರೆದು...

"ಮೋಡದ ದುರ್ದಿನಕೆ ಮಾರ್ದನಿ ಬರಲಿಲ್ಲ
ಎದೆಯೆಲ್ಲ ಘನನೀಲ ವ್ಯಾಪಿಸಿದರೆ
ಗುಡುಗಿಗೆ ನಡುಗಿದೆ ದುಂದುಭಿ
ರವವೊಂದು ಒಳಗಿವಿ ಕೇಳುತಿರೆ
ಗಕ್ಕನೆ ನಿಲ್ಲಲು ಹೌಹಾರಿ ಹಗಲ್ಲೆ
ಇರುಳಾಗಿ ಧ್ವನಿಯೊಂದು ಏಳುತಿದೆ"[೨೩]

ಪ್ರಕೃತಿಯಲ್ಲಾದ ಬದಲಾವಣೆಯಿಂದ ಆಕಾಶವೆಲ್ಲ ದಟ್ಟ ನೀಲಿಯಿಂದ ಕೂಡಿದ್ದು ಬಾನಲ್ಲಿ ರವಿಯು ಮೋಡಗಳಲ್ಲಿ ಮರೆಯಾಗಿರುವನು. ಗುಡುಗಿನ ಶಬ್ದಕ್ಕೆ ಹಗಲು ಇರುಳು ಎನ್ನದೆ ಪ್ರಕೃತಿ ಇರುವುದನ್ನು ಕವಿ ವರ್ಣಿಸಿದ್ದಾರೆ. ಮುಂದುವರೆದು ಮೋಡದಿಂದ ಚಂದ್ರ ಮತ್ತು ನಕ್ಷತ್ರಗಳು ಹೇಗೆ ಕಾಣುತ್ತಿದ್ದವು ಎಂಬುದನ್ನು ವಿವರಿಸಿದ್ದಾರೆ.

"ಮುಗಿಲಲ್ಲಾಡುವ
ಬಾವಿಲಿ ಮಲ್ಲಿಗೆ
ಕಿವಿಗೊಪ್ಪು ಚಳತುಂಬು
ಹೊಲೆ ಹೊಂಡದುಸಿರನ್ನ
ನಯವಾಗಿ ನೆಯ್ದಂಥ
ಮಂಜಿನ ಮೇಲ್ಸೆರಗು ಮೈತುಂಬ"[೨೪]

ಮಳೆಯ ಮೋಡಗಳು ಕಗ್ಗತ್ತಲನ್ನು ಆವರಿಸುತ್ತವೆ. ಆದರೆ ಚಳಿಯ ತುಂಡು ಮೋಡಗಳು ಕೆಳಗೆ ಚಲಿಸುತ್ತಿದ್ದರೆ ಚಂದ್ರ ಹಾಗೂ ಚುಕ್ಕೆಗಳು ಆ ಮೊಡದ ಮೇಲ್ಭಾಗದಲ್ಲಿ ಕಾಣಿಸುತ್ತವೆ. ಇದರಿಂದಾಗಿ ಆಕಾಶವು ತಲೆಕೆಳಗಾಗಿ ಬಾವಿಯಂತೆ ಕಾಣುವುದು. ಮೋಡಗಳ ಚಲನೆಯಿಂದಾಗಿ ಈ ಬಾವಿ ಅಲ್ಲಾಡಿದಂತೆ ಕಾಣುವುದು. ಈ ಅಲ್ಲಾಡತ್ತಿರುವ ಬಾವಿಯಲ್ಲಿಯ ಮಲ್ಲಿಗೆ ಹೂಗಳನ್ನು ಅಂದರೆ ಚುಕ್ಕಿಗಳನ್ನು ಧರಿಸುತ್ತಾಳೆ ನಮ್ಮ ಚಳಿಯಾಕೆ. ಈ ಆಕಾಶ ಮಲ್ಲಿಗೆಗಳೆಲ್ಲ ಅವಳಿಗೆ ಓಲೆಕೊಪ್ಪು ಹಾಗೂ ಚಳಿ ತುಂಬ ಎನ್ನುವ ಕರ್ಣಭೂಷಣಗಳಾಗಿವೆ. ಇನ್ನು ಅವಳ ಮೈತುಂಬ ಹೊದ್ದುಕೊಂಡಂತಹ ಮೇಲ್ಸೆರಗು ಎಂತಹದ್ದು. ತುಂಬಿ ತುಳುಕುತ್ತಿರುವ ಹೊಳೆ ಹಾಗೂ ಹೊಂಡಗಳ ನೀರು ಬಾಷ್ಪಿಭವನವಾಗುವುದನ್ನು ಬೇಂದ್ರೆಯವರು ಹೊಳೆಹೊಂಡಗಳ ಉಸಿರು ಎಂದು ವರ್ಣಿಸಿದ್ದಾರೆ. ಚಳಿಯಾಕೆ ಕೊಟ್ಟ ಆಭರಣಗಳು ಆಕಾಶದಲ್ಲಿದ್ದರೆ ಅವಳು ಉಟ್ಟ ಉಡುಪುಗಳು ಭೂಮಿಯ ಕೊಡುಗೆ. ಈ ರೀತಿಯಾಗಿ ಭೂಮಿ ಮತ್ತು ಆಕಾಶವನ್ನು ಮಳೆ ವ್ಯಾಪಿಸಿದ್ದಾಳೆ ಎಂದಿದ್ದಾರೆ.

ಮುಂದುವರೆದು...

"ತಗ್ಗಿನ್ಯಾಗ ಗಿಡದ ಗುಂಪು
ಹೊಂಡದ ನೀರು ತಂಪು
ದೂರಿಂದ ಕಂಡರೂ ಸೊಂಪು"[೨೫]

ಜೊತೆಯಾಗಿ ರಸ್ತೆಯಲ್ಲಿ ನಡೆದುಕೊಂಡು ಹೋಗುವಾಗ ಮಳೆ ಬಂದಾಗ ರಸ್ತೆಯ ಬದಿಯಲ್ಲಿ ಹರಿಯುತ್ತಿದ್ದ ನೀರನ್ನು ವರ್ಣಿಸಿದ್ದಾರೆ. ಆ ನೀರು ತಂಪಾಗಿರುತ್ತದೆ ಮತ್ತು ದೂರದಿಂದ ನೋಡಲು ಸುಂದರವಾಗಿರುತ್ತದೆ ಎಂದಿದ್ದಾರೆ. ಹೀಗೆ ದಾರಿಯಲ್ಲಿ ಮುಂದೆ ಸಾಗುವಾಗ ರಸ್ತೆಯ ಎಡಬಲದಲ್ಲಿನ ಗದ್ದೆಯ ಪೈರುಗಳು ಗದ್ದೆಯಲ್ಲಿ ಕಾಣುತಿದ್ದ ನೀರು ಇವುಗಳನ್ನು ನೋಡುತ್ತಾ ಮಕ್ಕಳು ಸಾಗುತ್ತಿರುವರು. ಇಂತಹ ಒಂದು ಅನುಭವವನ್ನು ತಿಳಿಸುತ್ತಾ ಮಳೆಯು ಗುಡುಗು, ಮಿಂಚು ಇವು ಮಕ್ಕಳ ಮೇಲೆ ಬೀರುವ ಪರಿಣಾಮವನ್ನು ಹೀಗೆ ವರ್ಣಿಸಿದ್ದಾರೆ.

"ಮುಗಿಲಾಗ ಮೋಡದ ಹಡಗು
ಎಲ್ಲೆಲ್ಲೊ ಮಿಂಚು ಗುಡುಗು
ಚಳಿಗಾಳಿ ತಂದರು ನಡುಗು
ಹುಡುಗ ಪಾಳ್ಯಾಕ್ಕ ಎಲ್ಲಾನು ಬೆಡಗು"[೨೬]

ಹಡಗಿನಂತಹ ಬೃಹತ್ ಮೋಡಗಳು ಆಕಾಶದಲ್ಲಿ ಮೂಡಿ ಅವು ಎಲ್ಲಾ ಕಡೆಯಲ್ಲೂ ಗುಡುಗು ಮಿಂಚು ಚಳಿಯನ್ನು ತಂದಿವೆ. ಈ ಗುಡುಗು ಮಿಂಚು ಚಳಿ ಮಳೆಗಳು ಯಾವುದನ್ನೂ ಲೆಕ್ಕಿಸದೆ ಮಕ್ಕಳು ಸಾಗುತ್ತಿದ್ದಾರೆ. ಎಲ್ಲವನ್ನು ಸಂತೋಷದಿಂದ ಸ್ವೀಕರಿಸುತ್ತಾರೆ ಎಂಬುದನ್ನು ಕವಿ ವಿವರಿಸಿದ್ದಾರೆ. ಶ್ರಾವಣ ಮಾಸ ಎಲ್ಲಾ ಅನಿಷ್ಟಗಳನ್ನು ದೂಡುವ ಮಾಸವಾಗಿದ್ದು ಈ ಮಾಸದಲ್ಲಿನ ಮಳೆಯು ಸಮೃದ್ಧಿಯ ಸಂಕೇತವಾಗಿ ಚಿತ್ರಿತವಾಗಿದೆ. ಹಾಗೆಯೇ

"ಅಡಗಿದೆ ದೃಷ್ಟಿ
ಆದರು ಸುರಿಯುತಿದೆ ವೃಷ್ಟಿ!
ಮೋಡದ ಮೇಲ್ಮೋಡ
ತಿಳಿಯದು ಏನಿದೆಯೋ ಗೂಡ!"[೨೭]

ಮಳೆಯ ಮೋಡದ ಸುಂದರ ವಾತಾವರಣದಿಂದಾಗಿ ನಿರಂತರವಾಗಿ ಸುರಿಯುತ್ತಿರುವ ಮಳೆ ಸೂರ್ಯ ಇದ್ದರೂ ಇಲ್ಲದಂತೆ ಮಾಡಿದೆ. ಇದು ಆಕಾಶದ ತುಂಬ ಮೋಡದ ಮೇಲೆ ಮೋಡ ಬಂದು ಆವರಿಸಿ ಸೂರ್ಯನಿರುವಿಕೆಯು ಸಹ ತಿಳಿಯದಾಗಿದೆ. ಹಾಗೆಯೇ ಹಕ್ಕಿಗಳ ಚಿಲಿಪಿಲಿ ಸದ್ದು ಕಪ್ಪೆಗಳ ಗುಟುರ್ಗುಡುವುದು, ಜೀರುಂಡೆಯ ಕಿಲಕಿಲ, ಹಸಿರಿನ ಉಲ್ಲಾಸ, ಪಾತರಗಿತ್ತಿಯ ಸುಳಿದಾಟ, ಆಕಾಶದ ಮೋಡ, ತುಂಬಿದ ಕೆರೆ, ಹೂಬಿಟ್ಟ ಗಿಡಗಳ ಕೂಟ, ರಸ ತುಂಬಿದ ನೇರಳೆ ಹಣ್ಣಿನ ಮರ ಇವೆಲ್ಲವೂ ಶ್ರಾವಣ ಮಾಸದ ಮಳೆಗಾಲದಲ್ಲಿ ಹೊಸ ಹುರುಪನ್ನು ಪಡೆದು ಕಂಗೊಳಿಸುತ್ತಿವೆ. ಒಟ್ಟನಲ್ಲಿ ಪ್ರಕೃತಿಯಲ್ಲಿ ವಾಸಿಸುವ ಜೀವಸಂಕುಲಕ್ಕೂ ಜಲಚರಗಳಿಗೂ ಜೀವಸೆಲೆಯನ್ನು ಈ ಮಳೆಗಾಲ ನೀಡುತ್ತದೆ. ಮಳೆಯು ಎಲ್ಲಾ ಜೀವರಾಶಿಗಳಿಗೂ ಉತ್ಸಾಹದ ಹೊಸ ಜೀವನಕ್ಕೆ ದಾರಿಯನ್ನು ತೋರಿಸುತ್ತದೆ. ಪ್ರಕೃತಿಗೆ ಚೇತನವನ್ನು ನೀಡುತ್ತದೆ ಎಂದು ಹೇಳುತ್ತಾರೆ. ಮುಂದುವರೆದು ಮಳೆ ಬಂದ ಪರಿಣಾಮ ತಮ್ಮ ಸಾಧನಕೇರಿಯ ಪರಿಸರದ ಮೇಲೆ ಹೇಗಾಗಿದೆ ಎಂಬುದನ್ನು ಕಟ್ಟಿಕೊಡುವ ಪ್ರಯತ್ನ ಮಾಡಿದ್ದಾರೆ.

"ಮಳೆಯ ಎಳೆಯುವ ತೇರಿಗೆ
ಹಸಿರು ಏರಿದೆ ಏರಿಗೆ
ಹಸಿರು ಸೇರಿದೆ ಊರಿಗೆ
ಹಸಿರು ಚಾಚಿದೆ ದಾರಿಗೆ
ನಂದನದ ತುಣುಕೊಂದು ಬಿದ್ದಿದೆ
ನೋಟ ಸೇರದು ಯಾರಿಗೆ । ಬಾರೋ"[೨೮]

ಧಾರವಾಡದ ಪರಿಸರದಲ್ಲಿ ಮುಂಗಾರು ಮಳೆಯ ಕಾಲದಲ್ಲಿ ಮಳೆ ನಿರಂತರವಾಗಿ ಬರಲು ಆರಂಭಿಸಿದೆ. ಮಳೆ ನಿರಂತರವಾಗಿ ಬೀಳುತ್ತಲಿದೆ, ಈ ಮಳೆಯಿಂದಾಗಿ ಗುಡ್ಡಬೆಟ್ಟಗಳೆಲ್ಲ ಕಾಡು ಮೇಡುಗಳೆಲ್ಲಾ ಚಿಗುರಿದೆ ಹಸಿರಾಗಿದೆ. ಈ ಹಸಿರು ಊರನ್ನು ಸಹ ಆವರಿಸಿದೆ. ಇದು ಸಮೃದ್ಧಿಯ ಸಂಕೇತವಾಗಿದೆ. ರಸ್ತೆಯ ಇಕ್ಕೆಲಗಳಲ್ಲೆಲ್ಲಾ ಗಿಡ ಮರಗಳು ಹಸಿರಿನಿಂದ ಚಾಚಿಕೊಂಡಿವೆ. ಈ ಸಂದರ್ಭದಲ್ಲಿ ನಂದನದ ತುಣುಕೊಂದು ಬಿದ್ದಿದೆ. ನೋಟ ಸೇರದು ಯಾರಿಗೆ ಈ ನೋಟ ಎಂದು ಬಣ್ಣಿಸಿದ್ದಾರೆ. ಮಳೆಯಿಂದಾಗಿ ಎಲ್ಲೆಡೆ ಹೊಸತನ ಮೂಡಿದೆ. ಈ ಹಸಿರು ಊರ ತುಂಬೆಲ್ಲಾ ಆವರಿಸಿದೆ. ರಸ್ತೆಯ ಇಕ್ಕೆಲಗಳಲ್ಲಿಯೂ ಹಸಿರು ಚಾಚಿಕೊಂಡಿದೆ. ಇಂತಹ ಸುಂದರ ಪರಿಸರ ಎಲ್ಲರಿಗೂ ನೋಡಲು ಅಣಿಯಾಗುತ್ತದೆ ಎಂಬುದು ಕವಿಯ ಭಾವ. ಇದು ಇಡೀ ಪರಿಸರದ ಮೇಲೆ ಮಳೆ ಹೇಗೆ ಪರಿಣಾಮ ಬೀರಿದೆ ಎಂಬುದನ್ನು ತಿಳಿಸುತ್ತದೆ.

ಮುಂದುವರೆದು...

"ಮಲೆಯ ಮೊಗವೇ ಹೊರಳಿದೆ
ಕೊಕಿಲಕೆ ಸವಿ ಕೊರಳಿದೆ
ಬೇಲಿಗೂ ಹೂ ಬೆರಳಿದೆ
ನೆಲಕೆ ಹರೆಯವು ಮರಳಿದೆ
ಭೂಮಿತಾಯ ಒಡಮುರಿದು ಎದ್ದಳೋ
ಶ್ರಾವಣದ ಸಿರಿ ಬರಲಿದೆ ॥ ಬಾರೋ"[೩೦]

ಮಳೆಯಿಂದಾಗಿ ತಮ್ಮ ಪರಿಸರದಲ್ಲಿನ ಗಿಡಮರಗಳೆಲ್ಲವೂ ಹಚ್ಚ ಹಸಿರಿನಿಂದ ಕಂಗೊಳಿಸುತ್ತಿವೆ. ಈ ಹಚ್ಚನೆಯ ಹಸಿರಿನ ವಾತಾವರಣದಲ್ಲಿ ಗಿಡಮರಗಳ ಮಧ್ಯ ರೆಂಬೆ ಕೊಂಬೆಗಳಲ್ಲಿ ಕುಳಿತಿರುವ ಪಕ್ಷಿಗಳೆಲ್ಲವು ಚಿಲಿಪಿಲಿ ಎಂಬ ಮಧುರ ಗಾನವನ್ನು ಹೊರಸೂಸುತ್ತಿವೆ. ರಸ್ತೆಯ ಇಕ್ಕೆಲಗಳಲ್ಲಿ ಮತ್ತು ಇತರ ಸ್ಥಳಗಳಲ್ಲಿರುವ ಬೇಲಿಯಲ್ಲೂ ಸಹ ಹಚ್ಚನೆಯ ಹಸಿರು ಆವರಿಸಿದೆ. ಆ ಬೇಲಿಗಳಲ್ಲಿಯೂ ಸಹ ರಂಗು ರಂಗಿನ ಬಣ್ಣ ಬಣ್ಣದ ಹೂಗಳು ಅರಳಿ ನಿಂತಿವೆ. ಈ ಮಳೆಗಾಲದ ಸಂಧರ್ಭ ಎಷ್ಟೊಂದು ಸುಂದರವಾಗಿದೆ. ನೆಲಕ್ಕೆ ಯೌವನವು ಮರಳಿ ಬಂದಿದೆ. ಭೂಮಿ ತಾಯಿ ನಿನಗೀಗ ಶ್ರಾವಣ ಮಾಸದ ಸುಖ ಸಮೃದ್ಧಿಯ ಕಾಲ ಬಂದಿದೆ ಒಡಮುರಿದು ಎದ್ದೇಳು ಎಂದಿದ್ದಾರೆ.

ಬೇಂದ್ರೆಯವರು ಮಳೆಯಿಂದಾಗಿ ಪರಿಸರದ ಮೇಲಾದ ಪರಿಣಾಮವನ್ನು ಸ್ಪಷ್ಟವಾಗಿ ಎಳೆಯೆಳೆಯಾಗಿ ಬಿಡಿಸುವ ಪ್ರಯತ್ನ ಮಾಡಿದ್ದಾರೆ. ಭೂಮಿಗೆ ಹರೆಯ ಬಂದಿದೆ. ಬೇಲಿಗೂ ಹೂ ಬೆರಳಿದೆ ಎಂದು ಹೇಳುವಲ್ಲಿ ಪರಿಸರದ ಸೂಕ್ಷ್ಮತೆಯನ್ನು ಸ್ಪಷ್ಟವಾಗಿ ತೆರೆದಿಟ್ಟಿದ್ದಾರೆ. ಒಟ್ಟಾರೆ ಪರಿಸರದಲ್ಲಾಗುತ್ತಿರುವ ಬದಲಾವಣೆಗೆ ಮಳೆ ಪ್ರೇರಕ ಶಕ್ತಿಯಾಗಿದೆ ಎಂಬುದನ್ನು ತೋರಿಸಿಕೊಟ್ಟಿದ್ದಾರೆ.

ಮುಂದುವರೆದು...

"ಮೋಡಗಳ ನೆರಳಾಟವು
ಅಡವಿ ಹೂಗಳ ಕೂಟವು
ಯಕ್ಷಿ ಮಾಡಿದ ಮಾಟವು
ನೋಡು ಬಾ ಗುಂಪಾಗಿ ಪಾತರ
ಗಿತ್ತಿಯ ಕುಣಿಯುವ ತೋಟವು ॥ ಬಾರೋ ॥"[೩೧]

ಬೇಂದ್ರೆಯವರು ಮಳೆಯ ಪರಿಣಾಮವನ್ನು ಹೊಸ ಬಗೆಯಲ್ಲಿ ಕಟ್ಟಿಕೊಡುವ ಪ್ರಯತ್ನ ಮಾಡಿದ್ದಾರೇನೋ ಎಂಬಂತೆ ಮೋಡಗಳ ನೆರಳಾಟ ಎಂದು ಬಳಸಿದ್ದಾರೆ. ಇಲ್ಲಿ ಮೋಡಗಳ ನೆರಳಾಟ ಎಂದರೆ ಶ್ರಾವಣದ ಆಗಮನವಾಗುತ್ತಿದ್ದಂತೆಯೇ ಮೋಡಗಳು ಸೂರ್ಯನ ಬಿಸಿಲಿನ ಜೊತೆಜೊತೆಯಲ್ಲಿ ಆಟವಾಡುವಂತೆ ಸೂರ್ಯನ ಕಿರಣಗಳು ಭೂಮಿಗೆ ಬೀಳದ ರೀತಿಯಲ್ಲಿ ಆಟವಾಡುತ್ತಿರುತ್ತವೆ. ಅಂದರೆ

ಮಂಜು ಮುಸುಕಿದ ವಾತಾವರಣದಿಂದ ಕೂಡಿರುತ್ತವೆ. ಕಾಡುಮೇಡುಗಳಲ್ಲೆಲ್ಲಾ ಹೂಗಳು ಅರಳಿ ಗುಂಪು ಗುಂಪಾಗಿ ಬಣ್ಣ ಬಣ್ಣದಿಂದ ಕೂಡಿವೆ. ಅದು ಬೇಂದ್ರೆಯವರ ಕಣ್ಣಿಗೆ ಹೂಗಳ ಕೂಟದ ರೀತಿಯಲ್ಲಿ ಕಾಣಿಸುತ್ತಿದೆ. ಈ ಹೂಗಳ ಮಕರಂದವನ್ನು ಹೀರಲು ಕೋಟಿಕೋಟಿ ಜೇನು ನೊಣಗಳು ಗುಂಪು ಗುಂಪುಗಳಾಗಿ ಈ ದಟ್ಟಡವಿಯ ತುಂಬಾ ಹಾರಾಡುತ್ತವೆ. ಹಾಗೆಯೇ ಬಣ್ಣಬಣ್ಣದ ಚಿಟ್ಟೆಗಳು ಹಾರಾಡುತ್ತಿವೆ. ಇವು ಪರಿಸರದ ಸೌಂದರ್ಯವನ್ನು ನೋಡಲು ಆಹ್ವಾನಿಸುತ್ತಿವೆ.

ಹೀಗೆ ಬೇಂದ್ರೆಯವರು ತಮ್ಮ ಕವನಗಳಲ್ಲಿ ಮಳೆಯು ಬಂದಂತಹ ಪರಿಣಾಮ ಪ್ರಕೃತಿಯ ಮೇಲೆ ಹೇಗಾಗುತ್ತದೆಂಬುದನ್ನು ಸಮಗ್ರವಾಗಿ ಕಟ್ಟಿಕೊಟ್ಟಿದ್ದಾರೆ. ಮಳೆಯು ಸಣ್ಣಪುಟ್ಟ ಜೀವಗಳನ್ನು ಒಳಗೊಂಡು ಹಕ್ಕಿ ಪಕ್ಷಿಗಳು ಗಿಡಮರಗಳು ಸೂರ್ಯ ಭೂಮಿ ಎಲ್ಲದರ ಮೇಲೂ ಭಿನ್ನ ಪರಿಣಾಮ ಬೀರುತ್ತದೆ. ಮಳೆ ಪ್ರಕೃತಿಯ ಸರ್ವ ಚೇತನವಾಗಿದೆ ಎಂಬುದನ್ನು ಕಟ್ಟಿಕೊಡಲು ಪ್ರಯತ್ನಿಸಿದ್ದಾರೆ.

ಲಕ್ಷ್ಮೀನಾರಾಯಣ ಭಟ್ಟರು ಮಳೆ ಕವನದಲ್ಲಿ ಹೊಸ ವರ್ಷ ಬಂದತೆ ಯಾರು ಬಂದರು ಗಿಡಮರಕೆ ಹೊಸ ವಸ್ತ್ರ ಯಾರು ತಂದರು ಎಂದು ಕೇಳುತ್ತಾ ಗಿಡ ಮರಗಳಿಗೆಲ್ಲಾ ಹೊಸತನವನ್ನು ತರುವುದು ಮಳೆ. ಅದು ಪ್ರಕೃತಿಯ ಚೇತನ ಶಕ್ತಿ ಎಂದಿದ್ದಾರೆ. ಕನ್ನಡದ ಮತ್ತೊಬ್ಬ ಕವಿ ಪು.ತಿ. ನರಸಿಂಹಾಚಾರ್ ಅವರು ತಮ್ಮ ಮಳೆ ಎಂಬ ಕವನದಲ್ಲಿ ಮಳೆಯನ್ನು ಕುರಿತಂತೆ ಮಳೆ ಮತ್ತು ಪ್ರಕೃತಿಯ ನಡುವಿನ ಸಂಬಂಧವನ್ನು ವರ್ಣಿಸಿದ್ದಾರೆ...

"ಅದಿಗೊ ದೆಸೆ ಕೊಡುವೆಡೆ ತಿರುಗುತಿದೆ ಮುಗಿಲು
ಹೆಬ್ಬಿದಿರ ಮಳೆಯು ಚೆಲುವನು ತೋರಿ ಬಿಳಲೂರಿ
ಹಬ್ಬಿರುವ ಮಹಾವಟವೃಕ್ಷದೊಲು ಹಸರಿಸುತ
ಇದೆಕೋ ಎನುತಿದೆ ನನಗೆ ಮೈಬಿಡದ ಮಿಂಚಿನೊಳು"[೨೧]

ಪು.ತಿ.ನ. ಅವರು ಈ ಕವನದಲ್ಲಿ ಮಳೆಯ ಪರಿಣಾಮವನ್ನು ಕುರಿತಂತೆ ಪ್ರಕೃತಿ ಮಳೆಯನ್ನು ಹೇಗೆ ಪ್ರಭಾವಿಸಿದೆ ಎಂಬುದನ್ನು ವರ್ಣಿಸಿದ್ದಾರೆ. ಅಲ್ಲಿ ನೋಡಲ್ಲಿ ದಾರಿ ಮತ್ತು ದಿಕ್ಕುಗಳು ಕೂಡುವ ಜಾಗದಲ್ಲಿ ತಿರುಗಿ ಬರುತ್ತಿದೆ. ಈ ಮುಗಿಲು ಹಿರಿದಾದ ಬಿದಿರಿನ ಮಳೆಯ ಚೆಲುವನ್ನು ತೋರಿಸಿ ಅದು ಬಿದ್ದಂತಹ ಭೂಮಿಯ ತುಂಬೆಲ್ಲ ಹಬ್ಬಿರುವ ಮಹಾ ವಟವೃಕ್ಷದ ರೀತಿ. ಎಂದರೆ ಬೃಹತ್ ಮರದಂತೆ ಮಳೆ ಭೂಮಿಯ ತುಂಬೆಲ್ಲಾ ಹಬ್ಬಿದೆ ಎನ್ನುತ್ತಾರೆ. ಅಂದರೆ ಬಿದಿರಿನ ಪೊದೆಯು ಹೇಗೆ ಬೃಹತ್ತಾಗಿ ಹಬ್ಬುತ್ತದೋ ಹಾಗೆ ಮಳೆಯು ಸ್ವಲ್ಪ ಆರಂಭದೊಂದಿಗೆ ಇಡೀ ಭೂ ಮಂಡಲವನ್ನೆ ವ್ಯಾಪಿಸಿದೆ. ಇದು ಮೈಬಿಡದ ಮಿಂಚಿನೊಳಿದೆ ಎಂದಿದ್ದಾರೆ. ಇದರ ವ್ಯಾಪಕತೆಯನ್ನು ಹೇಳುತ್ತಾ ಸ್ವಲ್ಪವಾಗಿ ಆರಂಭವಾಗುವ ಮಳೆ ಎಲ್ಲ ಕಡೆಯಲ್ಲೂ ತನ್ನ ಬಾಹುಗಳನ್ನು ಚಾಚುತ್ತದೆ. ಅದು ಇಡೀ ಪ್ರಕೃತಿಯೇ ನನ್ನದೆನ್ನುವ ರೀತಿಯಲ್ಲಿ ವ್ಯಾಪಿಸಿದೆ ಎನ್ನುತ್ತಾರೆ.

ಮುಂದುವರೆದು..

"ಕಾರೊಡಲ ಬಣ್ಣದೊಳ ತನ್ನ ಪನ್ನತಿಕೆಯನು
ಮೆರೆವ ಗುಡುಗಿನೊಳು ಗಿರಿ ಮೈತ್ರಿಯೊಳು ಸರ್ವಾತಿ
ಹರಕ್ಷೀರ ಧಾರೆಯೊಳು ಹಿಂದೆ ತಾ ಹಿಂದಿಟ್ಟು
ನೂರಾರು ಕವಿ ಮುದಗಳೈಸಿರಿಯ ತೆರುವಂತೆ"[೨೨]

ಮಳೆ ಬಿದಿರಿನ ಬೃಹತ್ ಮಳೆಯ ಚೆಲುವಿನಂತೆ ಎಲ್ಲೆಡೆಯು ಆವರಿಸಿದ ನಂತರ ಕಾರೊಡಲ ಬಣ್ಣದೊಳು ತನ್ನ ಅಂದರೆ ಕಡುಕಪ್ಪನೆಯ ಬಣ್ಣವನ್ನು ಹೊಂದಿದ ಮೋಡ ಮಳೆಯ ಮೋಡ ತನ್ನ ಪನ್ನತಿಕೆಯನ್ನು ಅಂದರೆ ಶೌರ್ಯ ಸಾಹಸದಿಂದ ಮೆರೆವ ಗುಡುಗು ಎಲ್ಲಾ ಬೆಟ್ಟ ಗುಡ್ಡಗಳಲ್ಲಿ ಅದರ ಪ್ರತಿಧ್ವನಿ ಕೇಳುತ್ತದೆ. ಅಂದರೆ ಗುಡುಗು ತನ್ನ ಶೌರ್ಯವಿದು ಎಂದು ಪ್ರದರ್ಶಿಸಿದಂತೆ ತೋರುತ್ತದೆ. ಹರಕ್ಷೀರ ಧಾರೆಯೊಳು ಹಿಂದೆ ತಾ ಹಿಂದಿಟ್ಟು ಹಾಲಿನ ಹೊಳೆಯಂತೆ ಮಳೆಯನ್ನು ಗುಡುಗು ಮಿಂಚುಗಳು ತಾ

ಮುಂದೆ ತಾ ಮುಂದೆ ಎಂದು ಬರುತ್ತಾ ನೂರಾರು ಕವಿಗಳಿಗೆ ಮುದಗಳ್ಯೆಸಿರಿಯ ತರುವಂತೆ ಎಂದು ಹೇಳಿದ್ದಾರೆ. ಪು.ತಿ.ನ. ಅವರು ಮಳೆಯು ಹೇಗೆ ಪ್ರಕೃತಿಯಲ್ಲಿ ವರ್ತಿಸುತ್ತದೆ ಎಂಬುದನ್ನು ವಿವರಿಸುತ್ತಾರೆ. ಗುಡುಗು ತನ್ನ ಶೌರ್ಯವನ್ನು ತೋರಿಸುವ ಹಾಗೆ ಆರ್ಭಟಿಸಿ ಬೆಟ್ಟಗುಡ್ಡಗಳಲ್ಲಿ ಪ್ರತಿಧ್ವನಿಸುವಂತೆ ಮಾಡುತ್ತದೆ. ಮಳೆ ತಾ ಮುಂದು ತಾ ಮುಂದು ಎಂದು ಬರುತ್ತದೆ ಎಂದು ಹೇಳುವ ಮೂಲಕ ಪ್ರಕೃತಿಯ ಮೇಲೆ ಮಳೆಯ ಇನ್ನೊಂದು ರೀತಿಯ ಪರಿಣಾಮ ಬೀರುತ್ತದೆ ಎಂಬುದು ಸ್ಪಷ್ಟವಾಗಿದೆ.

ಮುಂದುವರೆದು...

"ಸನಿಯ ಕೈದಿತು ಮಳೆ ನೆನೆನೆನೆದುಥೆನ್ನ ಮೈ
ಕುಳಿತೆಡೆಯ ಕುಳಿತಿಹೆನು ಚಿರಕಾಲದ ಭಿಲಷತ
ಸಲುವತೆರ ಅರಿತರಾರೀ ಮೆಘಭಾವ ಪಾ
ವನ ನದಿ ತೀರ್ಥವನು ತಂದಿಹುದೊ ವೆಂಗಡದ
ಮಲೆ ಮುಟ್ಟಿ ಬಂದಿಹುದೋ ಸೇಚನದೊಳೆನ್ನ ಹರಸೆ
ಕರುಣೆಯೊಳು ನಿಂತೆಡೆಯ ಅವಭೃಥ ಸ್ನಾತ ನೆನೆಸಿದೆ"[೩೪]

ಮಳೆ ಬರುವ ಕಾಲ ಸನಿಹವಾಯಿತು. ನನ್ನ ಮೈ ಮತ್ತೆಮತ್ತೆ ನೆನೆಯಿತು. ಕುಳಿತಲ್ಲಿಯೇ ತಾನು ಕುಳಿತಿರುವೆ. ಚಿರಕಾಲ ಎಂದರೆ ತನ್ನಲ್ಲಿ ಯಾವುದೇ ಬದಲಾವಣೆಗಳಾಗುತ್ತಿಲ್ಲ. ಮಳೆಯು ಇಡಿ ಸಮಾಜವನ್ನು ಸಲುಹುವ ರೀತಿಯಲ್ಲಿ ತನ್ನನ್ನು ಸಲುಹುತ್ತಿದೆ. ಇಂತಹ ಅಮೃತದ ಹನಿಗಳನ್ನು ಅರಿತವರು ಯಾರು? ಇದು ಪಾವನವಾದಂತಹ ನದಿಯ ನೀರು. ಇದು ಕೇವಲ ನದಿಯ ನೀರಲ್ಲ ತೀರ್ಥವೆಂದಿದ್ದಾರೆ. ಈ ಮಳೆ ಉತ್ತರದ ಬೆಟ್ಟಗುಡ್ಡಗಳನ್ನೆಲ್ಲ ಮುಟ್ಟಿ ಬಂದಿದೆಯೇನೋ ಇದು ಸಮಚಿತ್ತದಿಂದ ಹರುಸುತ್ತದೆ, ಕರುಣೆಯಿಂದ ಇದು ನಿಂತೆಡೆಯೇ ಅವಭೃಥ ಸ್ನಾತ ನೆನೆಸಿದೆ. ಇದು ತಪಸ್ಸು ಗೈದು ಬಂದ ಯೋಗಿಯಂತೆ ಕರುಣೆಯಿಂದ ಹರಸಿ ನಿಂತಿದೆ. ಪು.ತಿ.ನ. ಅವರು ಮಳೆ ಬಂದ ಪರಿಣಾಮ ಪ್ರಕೃತಿಯ ಮೇಲೆ ಹೇಗಾಗುತ್ತದೆ. ಎಂಬುದನ್ನು ಸ್ಪಷ್ಟವಾಗಿ ಕಟ್ಟಿಕೊಡುವ ಪ್ರಯತ್ನ ಮಾಡಿದ್ದಾರೆ. ಮಳೆ ಪ್ರಕೃತಿಗೆ ಹೇಗೆ ಅವಶ್ಯಕವೋ ಹಾಗೆ ಮಳೆ ಸೃಷ್ಟಿ ಪ್ರಕೃತಿಯಿಂದಲೆ ಎಂದಿದ್ದಾರೆ. ಮಳೆಯನ್ನು ಕುರಿತು ಹೇಳುತ್ತಾ ಮಳೆ ಬಿದಿರಿನ ಮೆಳೆಯಂತೆ ಹರಡುತ್ತದೆ ಶೌರ್ಯದಿಂದ ಗುಡುಗುತ್ತದೆ. ಮಳೆ ಎಲ್ಲ ಬೆಟ್ಟಗಳ ಶಿಖರವನ್ನು ಮುಟ್ಟಿ ಬರುತ್ತದೆ. ಇದು ನದಿಗಳಿಗೆ ಜೀವವನ್ನು ಕೊಡುತ್ತದೆ. ನದಿಗಳಲ್ಲಿ ಹರಿಯುವುದು ಕೇವಲ ನೀರಲ್ಲ ಅದು ತೀರ್ಥ ಎಂದಿದ್ದಾರೆ.

ಹೀಗೆ ಮಳೆಯ ಪರಿಣಾಮವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಒಟ್ಟಾರೆ ಮಳೆಯನ್ನು ಕುರಿತಂತೆ ಆಧುನಿಕ ಕನ್ನಡ ಕವಿಗಳು ತಮ್ಮ ಕವನಗಳಲ್ಲಿ ಮಳೆಯು ಹೇಗೆ ಪ್ರಕೃತಿಯ ಮೇಲೆ ಪ್ರಭಾವ ಬೀರಿದೆ ಎಂಬುದನ್ನು ವಿವರಿಸಿಕೊಂಡಿದ್ದಾರೆ. ಪ್ರಕೃತಿಯ ಕೊಡುಗೆಯಾದ ಮಳೆಯು ಪ್ರಕೃತಿಯ ಮರುಸೃಷ್ಟಿಗೆ ಅವಕಾಶವನ್ನು ಕಲ್ಪಿಸುತ್ತದೆ. ಪ್ರಕೃತಿಯನ್ನು ಸುಂದರವಾಗಿ ಕಾಣುವಂತೆ ಮಾಡುತ್ತದೆ. ಪ್ರಕೃತಿಯಲ್ಲಿನ ಜೀವಜಾಲಕ್ಕೆ ಜೀವಸೆಲೆಯಾಗಿದೆ. ಪ್ರಕೃತಿಯ ಸೃಷ್ಟಿಗೆ ಕಾರಣವಾಗಿದೆ. ಪ್ರಾಣಿಗಳಿಗೆ ಪಕ್ಷಿಗಳಿಗೆ ಮನುಷ್ಯರಿಗೆ ಸ್ಫೂರ್ತಿದಾಯಕವಾಗಿದೆ ಎಂದೆಲ್ಲಾ ವರ್ಣಿಸಿದ್ದಾರೆ. ಮಳೆಯು ಇಷ್ಟೆಲ್ಲಾ ಪರಿಣಾಮ ಬೀರಿದರೂ ಪ್ರಕೃತಿಯ ಮೇಲೆ ಬೀರಿದ ಕೆಟ್ಟಪರಿಣಾಮಗಳನ್ನು ಕವಿಗಳು ಕಟ್ಟಿಕೊಟ್ಟಿದ್ದಾರೆ. ಮಳೆಯು ಪ್ರಪಾತಗಳನ್ನು ಸೃಷ್ಟಿಸಿ ಮಣ್ಣನ್ನು ಕೊಚ್ಚಿಕೊಂಡು ಹೋಗುತ್ತದೆ. ಗಿಡಮರಗಳನ್ನು ನಾಶಪಡಿಸುತ್ತದೆ. ಆ ಮೂಲಕ ಪ್ರಕೃತಿಯ ನಾಶದಲ್ಲಿ ಕೆಲವು ಬಾರಿ ಮಳೆ ಕಾರಣೀಭೂತ ಪಾತ್ರವಹಿಸಿದೆ. ಹೀಗೆ ಎರಡೂ ರೀತಿಯಲ್ಲಿಯೂ ಧನಾತ್ಮಕ ಮತ್ತು ಋಣಾತ್ಮಕ ಪರಿಣಾಮಗಳನ್ನು ಪ್ರಕೃತಿಯ ಮೇಲೆ ಬೀರಿದೆ. ಒಟ್ಟಾರೆ ಮಳೆ ಮನುಷ್ಯನ ಜೀವನಕ್ಕೆ ಅವಶ್ಯಕವಾಗಿದೆ.

**ಕೊನೆ ಟಿಪ್ಪಣಿಗಳು**

೧. ಕನ್ನಡ ಕಾವ್ಯದಲ್ಲಿ ಪ್ರಕೃತಿಯ ವರ್ಣನೆ : ಚಂದ್ರಶೇಖರ್. ಪುಟ ಸಂಖ್ಯೆ ೩೫
೨. ಅದೇ ಪುಟ
೩. ನಾದಲೀಲೆ, ದ. ರಾ. ಬೇಂದ್ರೆ, ಪುಟ ಸಂಖ್ಯೆ ೧೪
೪. ಮಳೆಗಾಲ, ದ. ರಾ. ಬೇಂದ್ರೆ, ಪುಟ ಸಂಖ್ಯೆ ೬೦
೫. ಅದೇ ಪುಟ
೬. ಅದೇ ಪುಟ
೭. ಸಮಗ್ರ ಕಾವ್ಯ, ಕುವೆಂಪು ಪುಟ ಸಂಖ್ಯೆ ೨೬೦
೮. ಅದೇ ಪುಟ
೯. ಅದೇ ಪುಟ
೧೦. ಅದೇ ಪುಟ
೧೧. ಅದೇ ಪುಟ
೧೨. ಅದೇ ಪುಸ್ತಕ ಪುಟ ಸಂಖ್ಯೆ ೨೬೧
೧೩. ಅದೇ ಪುಟ
೧೪. ಅದೇ ಪುಟ
೧೫. ಸಮಗ್ರ ಕಾವ್ಯ : ಕಣವಿ, ಪುಟ ಸಂಖ್ಯೆ ೩೦೩
೧೬. ಅದೇ ಪುಟ
೧೭. ರತ್ನ ದೀಪ : ಬಸು ಪಟ್ಟದ, ಪುಟ ಸಂಖ್ಯೆ ೨೨
೧೮. ಅದೇ ಪುಟ
೧೯. ನವೋದಯ: ವಿ. ಕೃ. ಗೋಕಾಕ್: ಪುಟ ಸಂಖ್ಯೆ ೨೬೩
೨೦. ಮೋಡಗಳು. ಬೋರೇಗೌಡ ಚಿಕ್ಕಮರಳಿ ಪುಟ ಸಂಖ್ಯೆ ೧೮
೨೧. ತಪಸ್ಸಿಗಿಳಿದ ಮಳೆ: ನಾಗಣ್ಣ ಕಿಲಾರಿ ಪುಟ ಸಂಖ್ಯೆ ೫೪
೨೨. ಜೀವದಾಯಿ ನೀರು ಹಾಗು ಮಳೆ (ಸಂ) ವೆಕಟರಮಣಯ್ಯ: ಕವನ: ಮಳೆಗಾಲ. ಎಸ್.ಜಿ. ನರಸಿಂಹಾಚಾರ್ಯ ಪುಟ ಸಂಖ್ಯೆ ೩೮
೨೩. ಅದೇ ಪುಟ
೨೪. ವಚನ ದವನ: ಲಿಂಗಯ್ಯ ಡಿ ಪುಟ ಸಂಖ್ಯೆ ೩೫
೨೫. ಅದೇ ಪುಟ
೨೬. ಅದೇ ಪುಟ
೨೭. ಔದುಂಬರ ಗಾಥೆ: ಸಂಪುಟ. ೪. ದ. ರಾ. ಬೇಂದ್ರೆ ಜೀವನ ಮಹಾ ಕಾವ್ಯ, ಪುಟ ಸಂಖ್ಯೆ ೨೨೫
೨೮. ಅದೇ ಪುಟ
೨೯. ಅದೇ ಪುಟ
೩೦. ಅದೇ ಪುಸ್ತಕ ಪುಟ ಸಂಖ್ಯೆ ೨೩೭
೩೧. ಅದೇ ಪುಟ
೩೨. ಜನಪ್ರಿಯ ಭಾವಗೀತೆಗಳು : ಲಕ್ಷ್ಮೀನಾರಾಯಣ ಭಟ್ಟ, ಪುಟ ಸಂಖ್ಯೆ ೩೮
೩೩. ಅದೇ ಪುಟ
೩೪. ಅದೇ ಪುಟ

## ಅಧ್ಯಾಯ – ಐದು

## ಮಳೆ ಬಂದ ಪರಿಣಾಮ : ಜನರ ಮೇಲೆ

### ಪೀಠಿಕೆ

ಮಳೆಯು ಜನರ ಜೀವನವನ್ನು ಬಹಳವಾಗಿ ಪ್ರಭಾವಿಸಿದೆ. ಮಳೆಯು ಪ್ರಕೃತಿಯ ಕೊಡುಗೆಯಾಗಿದೆ. ಮಳೆಯಿಂದಲೇ ಮನುಷ್ಯನು ತನ್ನೆಲ್ಲಾ ಆಸೆ ಆಕಾಂಕ್ಷೆಗಳನ್ನು ಈಡೇರಿಸಿಕೊಳ್ಳುತ್ತಾನೆ. ಅಂದರೆ ಮೂಲಭೂತವಾದ ಆಹಾರ ಮತ್ತು ನೀರನ್ನು ಪಡೆಯಲು ಮಳೆಯನ್ನು ಬಿಟ್ಟು ಬೇರೆ ಯಾವುದೇ ಆಧಾರವಿಲ್ಲ. ಹಾಗಾಗಿ ಮಳೆಯು ಜನರ ಜೀವನವನ್ನು ಬಹಳವಾಗಿ ಪ್ರಭಾವಿಸಿದೆ. ಇಂತಹ ಪರಿಣಾಮ ಮುಖ್ಯವಾಗಿ ಎರಡು ರೀತಿಯಲ್ಲಿರುತ್ತದೆ. ಒಂದನೆಯದು ಮಳೆ ಬಂದು ಜನರ ಜೀವನವನ್ನು ರೂಪಿಸಿಕೊಳ್ಳಲು ಸಹಾಯಕವಾಗುತ್ತದೆ. ಎರಡನೆಯದು ಕಟ್ಟಿಕೊಂಡ ಜೀವನವನ್ನು ಮಳೆ ನಾಶ ಮಾಡುವುದು. ಈ ಎರಡು ರೀತಿಯ ಪರಿಣಾಮಗಳನ್ನು ಮಳೆ ಜನರ ಜೀವನದ ಮೇಲೆ ಬೀರಿದೆ.

ಮಳೆ ಮುಖ್ಯವಾಗಿ ಮನುಷ್ಯ ಮತ್ತು ಪ್ರಕೃತಿಗೆ ಆಧಾರವಾಗಿರುವುದರಿಂದ ಮನುಷ್ಯನ ಮೇಲಿನ ಪ್ರಭಾವವನ್ನು ಧನಾತ್ಮಕವಾಗಿಯೇ ಸ್ವೀಕರಿಸಬೇಕು. ಕಾರಣ ಕುಡಿಯುವ ನೀರು ಸಿಗದೆ ಹೋದರೆ ಬದುಕಲು ಸಾಧ್ಯವಿಲ್ಲ. ಭಾರತದ ಸಂದರ್ಭದಲ್ಲಿ ಮಳೆಯನ್ನು ಹಿಂಗಾರು ಮಳೆ ಮತ್ತು ಮುಂಗಾರು ಮಳೆ ಎಂದು ಎರಡು ರೀತಿಯಲ್ಲಿ ಗುರುತಿಸುತ್ತಾರೆ. ಭಾರತಕ್ಕೆ ಮುಂಗಾರು ಮಳೆ ಎಂದರೆ ನೈರುತ್ಯ ದಿಕ್ಕಿನಿಂದ ಬರುವ ಮಳೆ. ನೈರುತ್ಯ ವಾಣಿಜ್ಯ ಮಾರುತಗಳು ಜೂನ್ ತಿಂಗಳಿನಿಂದ ಆರಂಭವಾಗಿ ಅಕ್ಟೋಬರ್ ಹದಿನೈದರವರೆಗೆ ಇರುತ್ತವೆ. ಇದು ಭಾರತದ ಪಶ್ಚಿಮ ದಿಕ್ಕಿನಿಂದ ಪಶ್ಚಿಮದ ಅರಬ್ಬಿ ಸಮುದ್ರದಲ್ಲಿ ಆರಂಭವಾಗಿ ಭಾರತದ ಪಶ್ಚಿಮ ತೀರಗಳಿಗೆ ಹೆಚ್ಚಾಗಿಯೂ, ಉಳಿದ ಭಾಗಗಳಿಗೆ ಸಾಧಾರಣವಾಗಿಯೂ ಮಳೆಯನ್ನು ತರುತ್ತವೆ. ಹಿಂಗಾರು ಮಳೆ ಎಂದರೆ ಈಶಾನ್ಯ ಮಾರುತಗಳಿಂದ ಬರುವ ಮಳೆ. ಉತ್ತರ ದಿಕ್ಕಿನಿಂದ ಮಾರುತಗಳು (ಗಾಳಿ) ಆರಂಭವಾಗಿ ವಾಯುಭಾರ ಕುಸಿತವಿರುವ ಬಂಗಾಳ ಕೊಲ್ಲಿ ಪ್ರವೇಶ ಮಾಡಿ ಭಾರತದ ಪೂರ್ವ ತೀರದ ರಾಜ್ಯಗಳಿಗೆ ಮಳೆ ತರುವುದು, ಮಧ್ಯ ಭಾಗಕ್ಕೆ ಸಾಧಾರಣ ಮಳೆ ತರುವುದು.

ಮಳೆಯು ಮುಂಗಾರು ಮತ್ತು ಹಿಂಗಾರು ಎಂದು ಗುರುತಿಸಲ್ಪಟ್ಟಿದೆ. ಮುಂಗಾರು ಮಳೆಯು ಹಿಂಗಾರು ಮಳೆಗಿಂತ ಹೆಚ್ಚಿನ ಪ್ರಮಾಣದ ಮಳೆಯನ್ನು ತರುತ್ತದೆ. ಹಾಗೂ ಹೆಚ್ಚು ಜನರ ಜೀವನಕ್ಕೆ ಆಸರೆಯಾಗುತ್ತದೆ. ಮಳೆ ಕೆಲವರ ಜೀವನಕ್ಕೆ ಮುಳುವಾಗಿ ಪರಿಣಮಿಸುತ್ತದೆ. ಮಳೆಯನ್ನು ಇಂದು ಪಟ್ಟಣದ ಜನರು ದ್ವೇಷಿಸುವ ಮಟ್ಟಕ್ಕೆ ಕೊಂಡೊಯ್ಯುವಷ್ಟು ಕಿರಿಕಿರಿಯುಂಟುಮಾಡಿದೆ. ಇನ್ನು ಕೆಲವರ ಜೀವನವನ್ನೆ ಸರ್ವನಾಶ ಮಾಡಿದೆ. ಅದಕ್ಕೆ ಉದಾಹರಣೆಯಾಗಿ ೨೦೧೪ರಲ್ಲಿ ಜಮ್ಮು ಮತ್ತು ಶ್ರೀನಗರದಲ್ಲಿ ಉಂಟಾದ ಪ್ರವಾಹ. ಇದು ೩೦೦ಕ್ಕೂ ಹೆಚ್ಚು ಜನರನ್ನು ಬಲಿ ತೆಗೆದುಕೊಂಡಿತು. ಅಂತೆಯೇ ಲಕ್ಷಾಂತರ ಮಂದಿಯನ್ನು ಪ್ರವಾಹದಲ್ಲಿ ಸಿಲುಕಿಸಿತು. ಹೀಗೆ ಮಳೆ ಎರಡು ರೀತಿಯ ಪರಿಣಾಮಗಳನ್ನು ಜನರ ಮೇಲೆ ಬೀರಿದೆ. ಅದನ್ನು ಕವಿಗಳು ತಮ್ಮ ಕವನಗಳಲ್ಲಿ ಹೇಗೆ ಕಟ್ಟಿ ಕೊಟ್ಟಿದ್ದಾರೆ ಎಂಬುದನ್ನು ಮುಂದೆ ಗುರುತಿಸಲಾಗಿದೆ.

ಲೀಲಾ ಕಲಕೋಟೆಯವರು "ಶ್ರಾವಣದ ಸೆರಗು" ಎಂಬ ಕವನ ಸಂಕಲನದಲ್ಲಿ 'ಮಳೆ' ಎಂಬ ಕವಿತೆಯಲ್ಲಿ ಮಳೆ ಬಂದ ಪರಿಣಾಮ ಜನರ ಮೇಲೆ ಹೇಗಾಗಿದೆ ಎಂಬುದನ್ನು ಕಟ್ಟಿಕೊಟ್ಟಿದ್ದಾರೆ.

"ಎಂದಿನಂತಿಲ್ಲದೀ ಮಳೆ
ಮಳೆಯಾಗುಳಿದಿಲ್ಲ
ಮನ ಮನೆಗಳ ನಡುಗಿಸಿ

ಭಯಾನಕದ ಚಿತ್ರಗಳ
ಬಿಡಿಸಿಡ ತೊಡಗಿವೆ
ಎಲ್ಲಿ ಕಣ್ಣು ಹಾಯಿಸಿದರೂ
ನೀರೆ ನೀರು
ಮನೆ ಜನ ಗಿಡ ಕಟ್ಟಡ
ಪ್ರಾಣಿ ಪಕ್ಷಿ ಸಂಕುಲ
ವಾಹನಗಳೆಲ್ಲ ನೀರಲ್ಲಿ
ತೇಲುವ ಮೀನುಗಳಾಗಿ
ಚಟಪಟ ಲಟಪಟ”[೧]

ಮಳೆಯು ಎಂದಿನಂತೆ ಈ ದಿನ ಬರುತ್ತಿಲ್ಲ. ಅದು ಕೇವಲ ಮಳೆಯಾಗಿ ಉಳಿದಿಲ್ಲ. ಎಂದರೆ ಅದರ ಭೀಕರತೆಯನ್ನು ನಾವು ಇಲ್ಲಿ ಊಹಿಸಬಹುದು. ಮಳೆ ಅತ್ಯಂತ ಶಕ್ತಿ ಮತ್ತು ಪ್ರಭಾವಶಾಲಿಯಾಗಿದೆ. ಅದು ಅತ್ಯಂತ ಭೀಕರವಾಗಿದೆ. ಮಳೆಯು ಮನಸ್ಸನ್ನು, ಮನೆಗಳನ್ನು ನಡುಗಿಸುವುದು. ಮಳೆಯು ಭಯಂಕರವಾದ ಚಿತ್ರಗಳನ್ನು ಬಿಡಿಸಿಡತೊಡಗಿದೆ. ಅಂದರೆ ಮಳೆ ಬಂದ ಪರಿಣಾಮ ಎಷ್ಟರಮಟ್ಟಿಗೆ ಜನಜೀವನದ ಮೇಲೆ ಪ್ರಭಾವ ಬೀರಿದೆ ಎಂಬುದನ್ನು ಗುರುತಿಸಲು ಸಾಧ್ಯವಿಲ್ಲದಂತಾಗಿದೆ. ಈ ಮಳೆಯು ಎಷ್ಟರಮಟ್ಟಿಗೆ ಸುರಿದಿದೆ ಎಂದರೆ ಎಲ್ಲಿ ಕಣ್ಣು ಹಾಯಿಸಿದರೂ ನೀರೆ ನೀರು ಎಂದಿದ್ದಾರೆ. ಮನೆಯಲ್ಲಿ ನೀರು ನುಗ್ಗಿದೆ. ಜನ ಗಿಡ, ಕಟ್ಟಡ, ಪ್ರಾಣಿ–ಪಕ್ಷಿ ಸಂಕುಲ ವಾಹನಗಳೆಲ್ಲ ನೀರಲ್ಲಿ ತೇಲುವ ಮೀನುಗಳಾಗಿ ಚಟಪಟ–ಲಟಪಟ ಎಂದಿದ್ದಾರೆ. ಮಳೆಯಿಂದಾಗಿ ಎಲ್ಲಾ ಪ್ರಾಣಿ–ಪಕ್ಷಿ ಸಂಕುಲಗಳನ್ನು ಒಳಗೊಂಡು ನೀರಲ್ಲಿ ಕೊಚ್ಚಿ ಹೋಗುತ್ತವೆ. ಅಲ್ಲದೆ ವಾಹನಗಳೆಲ್ಲ ನೀರಲ್ಲಿ ತೇಲುವ ಮೀನುಗಳಂತಾಗಿವೆ ಎಂದಿದ್ದಾರೆ. ಮಳೆಗೆ ಹೇಗೆ ಇಡೀ ಜೀವ ಪರಿಸರ ವ್ಯವಸ್ಥೆಯನ್ನು ನಾಶದ ಅಂಚಿಗೆ ಕೊಂಡೊಯ್ಯುವ ಶಕ್ತಿ ಇದೆ. ಅದರ ಪರಿಣಾಮ ಎಷ್ಟು ಪ್ರಬಲ ಪ್ರಭಾವ ಬೀರುತ್ತಿದೆ ಎಂಬುದನ್ನು ನಾವು ಗುರುತಿಸಬಹುದಾಗಿದೆ. ಒಟ್ಟಾರೆಯಾಗಿ ಮಳೆ ಬಂದ ಪರಿಣಾಮ ಜನರ ಜೀವನವನ್ನು ಹೇಗೆ ಹಾಳುಮಾಡಿದೆ ಎಂಬುದನ್ನು ಸ್ಪಷ್ಟವಾಗಿ ವಿವರಿಸಿದ್ದಾರೆ.

ಅಬ್ದುಲ್ ರಶೀದ್ ಅವರು “ನನ್ನ ಪಾಡಿಗೆ ನಾನು” ಎಂಬ ಕವನ ಸಂಕಲನದಲ್ಲಿ ಮಳೆಯ ಪರಿಣಾಮವನ್ನು ಕುರಿತು ಈ ರೀತಿಯಲ್ಲಿ ವಿವರಿಸುವ ಪ್ರಯತ್ನ ಮಾಡಿದ್ದಾರೆ.

“ಇಂದು ಎನಗೆ ಇಂತ ಸುಖ ಬಂತೆ ಎಲ್ಲಿಂದ
ಪರಮಾತ್ಮದಿಂದ ಮಣ್ಣಿನಿಂದ ಮಳೆ ಹಾತೆ ನಿನ್ನಿಂದ
ಹಾತೆ ಬಂದರೂ ಮಳೆಯ ಸುಳಿವೇ ಇಲ್ಲ ಯಾಕಣ್ಣ?
ತಂಗಿ ಎನಗೆ ಇಂಥ ಸುಖವು ಬಂತೆ ಎಲ್ಲಿಂದ”[೨]

ಅಣ್ಣನೊಬ್ಬ ತಂಗಿಯನ್ನು ಕುರಿತು ತನಗೆ ಬಂದ ಈ ಐಶ್ವರ್ಯಕ್ಕೆ ಕಾರಣವೇನು ಎಂಬುದನ್ನು ತಿಳಿಸುತ್ತಾ ನನಗೆ ಈ ದಿನ ಇಂತಹ ಸುಖ ದೊರೆತಿರುವುದು ಪರಮಾತ್ಮನಿಂದ, ಮಣ್ಣಿನಿಂದ, ಮಳೆಯಿಂದ. ಇವೆಲ್ಲ ಸಿಕ್ಕಿದ್ದು ನಿನ್ನಿಂದ ಎಂದು ಹೇಳುತ್ತಾನೆ. ಆದರೂ ಮಳೆಯ ಸುಳಿವೆ ಇಲ್ಲದಂತಾಗಿದೆಯಲ್ಲಾ ಎಂದು ಕಳವಳಿಸುತ್ತಾನೆ. ಮತ್ತೆ ತಂಗಿಯನ್ನು ಪ್ರಶ್ನಿಸುವನು, ತಂಗೀ ನನಗೆ ಈ ಸುಖ ಬಂದಿದ್ದಾದರೂ ಎಲ್ಲಿಂದ ಎಂದು ಕೇಳುತ್ತಾನೆ. ಮುಂದುವರೆದು ತಂಗಿ ನಿನ್ನ ಮೋಹದಿಂದ ಮಳೆಯು ಸುರಿದಿಲ್ಲ. ಅಲ್ಲಿ ಬಂದ ಮಳೆಯು ಇಲ್ಲಿ ಬಂದಿಲ್ಲ ಎನ್ನುತ್ತಾ ತಂಗಿ ಬಂದ ಊರಿಂದ ಮಳೆಯನ್ನು ತರಲು ಸಾಧ್ಯವೆ ಎಂದು ಪ್ರಶ್ನಿಸುತ್ತಾನೆ. ತಂಗಿ ನೆನೆದರೆ ಹನಿಗಳು ಮಾತ್ರ ಬೀಳುತ್ತವೆ. ಆದರೆ ಮಳೆಯನ್ನು ತರಲು ಸಾಧ್ಯವೆ ಎಂದು ಕೇಳುತ್ತಾರೆ. ಮುಂದುವರೆದು...

“ಮುಡಿಯೆ ಮುಡಿಯೆ ಮುಗಿಲು ಮಿಂಚು

ಪು. ತಿ. ನರಸಿಂಹಾಚಾರ್ಯರು ತಮ್ಮ 'ಕರಿ ಮುಗಿಲ ಹಾಡು' ಎಂಬ ಕವನದಲ್ಲಿ ಮಳೆ ಬಂದ ಪರಿಣಾಮ ಜನರ ಮೇಲೆ ಹೇಗಾಗಿದೆ ಎಂಬುದನ್ನು ವಿವರಿಸುವ ಪ್ರಯತ್ನ ಮಾಡಿದ್ದಾರೆ.

"ಬಲವಂತರ ಸಿರಿ ಸುಲಿಯುವ ಸಾಹಸಿ...
ಕಾರ ಕರಾಳ ದೂರಿದಿ ಬರೆ ನೀ
ಕಣ್ಣಿಗೆ ಬಲು ಬಲು ಚೆನ್ನ
ಮಳೆಯಂ ಬೇಟಿಗೆ ಮುಪ್ಪಿಗು ಸಾವಿಗು
ತಿರೆ ಬಿಟ್ಟುಡುವ ಮುನ್ನ"[೬]

ಮಳೆಯೇ ನೀನು ಸಾಮಾನ್ಯನಲ್ಲ, ಬಲವಂತರನ್ನು ಅವರ ಸಿರಿಯನ್ನು, ಅವರ ಸಂಪತ್ತನ್ನು ಕಿತ್ತುಕೊಳ್ಳುವ ಶಕ್ತಿ ಇರುವವನು ನೀನು. ನಮಗೆ ಹತ್ತಿರದವನಾದೆ ಎಂದಿದ್ದಾರೆ. ಕಾರ ಕರಾಳ ದೂರದಿ ಬರೆ ನೀ ಕಣ್ಣಿಗೆ ಬಲು ಬಲು ಚೆನ್ನ ಎಂದಿದ್ದಾರೆ. ದೂರದಿಂದ ಕಪ್ಪು ಮೋಡವನ್ನು ಹೊತ್ತು ಬರುವ ಮಳೆ ಕವಿಗೆ ನೋಡಲು ಸುಂದರ, ಪ್ರಕೃತಿಯನ್ನು ನಿರ್ಮಿಸಿದೆ. ಮಳೆ ನೀನು ಬಂದಿದ್ದೆ ಆದರೆ ಮುಪ್ಪು ಮತ್ತು ಸಾವು ಎರಡೂ ಸಹ ದೂರ ಓಡುತ್ತವೆ ಎಂದಿದ್ದಾರೆ. ಮಳೆಗೆ ಎಂತಹ ಅಭೂತಪೂರ್ವ ಶಕ್ತಿ ಇದೆ ಎಂದರೆ ಅದು ಸುಂದರ ಪ್ರಕೃತಿಯನ್ನು ನಿರ್ಮಿಸುತ್ತದೆ. ಮುಪ್ಪು ಮತ್ತು ಸಾವನ್ನು ಗೆಲ್ಲುವ ಚೇತನ ಶಕ್ತಿಯನ್ನು ಮನುಷ್ಯನಿಗೆ ಕೊಡುತ್ತದೆ ಎಂದಿದ್ದಾರೆ. ಮುಂದುವರೆದು...

"ನೀ ಮೃದಡಹುತ ದಡ ದಡ ನಡೆಯಲು
ತರು ಗಿಡವೆಲ್ಲಕು ಪುಳಕ
ನಾಡೆ ಜಳಜಳ ನಗುವುದು ನಮ್ಮೀ
ಮುದಿ ಯಲೆಗಾಗಲು ಜಳಕ"[೭]

ಮಳೆಯು ಬರುವ ಸಂದರ್ಭದಲ್ಲಿ ಮಳೆ ಸುರಿಯುತ್ತಿದ್ದರೆ ಸುರಿಯುತ್ತ ಮುಂದೆ ಸಾಗುತ್ತಿದ್ದ ಪ್ರಾಣಿ, ಗಿಡ-ಮರಗಳೆಲ್ಲ ಸಂತೋಷಗೊಳುತ್ತವೆ. ನಾಡೆಲ್ಲ ನಗುವುದು. ಈ ಗುಡ್ಡವು ಮಳೆಯಿಂದ ತೊಯ್ದಾಗ ಅಂದರೆ ಗುಡ್ಡದಿಂದ ಮಳೆ ಸುರಿದಿದೆ ಎಂಬ ಭಾವವಿದೆ. ಮಳೆಯನ್ನು ತರಲು ನೆರವಾಗಿದೆ. ಜಳಕ ಮಾಡಿ ಕೊಂಡಿರುತ್ತದೆ. ಹಾಗಾಗಿ ಜನ ಅದನ್ನು ಕಂಡು ನಗುತ್ತಿದ್ದಾರೆ. ಮುಂದುವರೆದು...

"ಮಳೆ ಮುಗಿಲೇ ಬಿಳಿ ಮುಗಿಲೇ
ಎಲ್ಲಿ ತಂದೆಯೇ ಇಂತಹ ಮಳೆ
ತಂದೆಯ ತೆರದೊಳು ತಂದುದ ತೇರುತ
ಹಾಯಾಗುವ ನಿನಗೆಂತಹ ಕಳೆ"[೮]

ಮಳೆಯ ಮೋಡವನ್ನು ಕವಿ ಪ್ರಶ್ನಿಸುತ್ತಿದ್ದಾರೆ. ಇಂತಹ ಮಳೆಯನ್ನು, ಮೋಡವನ್ನು ಪ್ರಶ್ನಿಸುತ್ತ ಎಲ್ಲಿಂದ ತಂದೆ ಇಂತಹ ಮಳೆಯನ್ನು ತಂದೆಯ ತೆರದೊಳು ತಂದುದು ತೇರುತ ಹಾಯಾಗುವ ನಿನಗೆಂತಹ ಕಳೆ ಎಂದಿದ್ದಾರೆ. ಈ ಕವನದಲ್ಲಿ ಪು. ತಿ. ನ. ಅವರು ಮಳೆಯು ಜನರ ಮೇಲೆ ಬೀರುವ ಪರಿಣಾಮ ಹೇಗೆ ಎಂಬುದನ್ನು ವಿವರಿಸುತ್ತಾ ಮಳೆ ಬರುವ ಸೌಂದರ್ಯ ಆನಂದವನ್ನು ತಂದುಕೊಡುತ್ತದೆ. ಅದು ಸಾವು ಮತ್ತು ಮುಪ್ಪುಗಳನ್ನು ದೂರವಿಡುವ ಶಕ್ತಿಯನ್ನು ಹೊಂದಿದೆ ಎಂದಿದ್ದಾರೆ.

ಕೆ.ಎಸ್. ನಿಸಾರ್ ಅಹಮದ್ ಅವರು 'ಸಂಜೆ ಐದರ ಮಳೆ' ಎಂಬ ಕವನದಲ್ಲಿ ಮಳೆ ಬಂದ ಪರಿಣಾಮ ಜನರ ಮೇಲೆ ಹೇಗೆಲ್ಲಾ ಆಯಿತೆಂಬುದನ್ನು ಹಾಸ್ಯಮಯವಾಗಿ ಕಟ್ಟಿಕೊಡುವ ಪ್ರಯತ್ನ ಮಾಡಿದ್ದಾರೆ. ಸಹ್ಯಾದ್ರಿ ಕಾಲೇಜಿನಲ್ಲಿ ಒಂದೇ ತರದ ಸಂಜೆ ಐದರ ಮಳೆ ಬರುತ್ತದೆ ಎಂದು ಹೇಳುತ್ತಾರೆ. ಅಲ್ಲಿ ಪಕ್ಷಿಗಳಿವೆ. ಅವುಗಳಿಗೂ ಮಳೆ ಕಿರಿಕಿರಿ ಉಂಟುಮಾಡುತ್ತಿದೆ ಎನ್ನುತ್ತಾ ಮುಂದುವರೆದು...

"ಯಾವ ಗಾಳಿ
ಹರಟುತ್ತ ಸಂಬಳ ಒಡತಿ
ಕಾರಿಡಾರಿಗೆ ಬಂದ ಮೇಷ್ಟ್ರರಿಗೆ
ಇರಿಚಲಾಗಿ ತಾಗಿ
ಶಾಪಕ್ಕೆ ಬಾಗಿ"

ಮಲೆನಾಡಿನಲ್ಲಿ ಮಳೆಗಾಲ ಬಂತೆಂದರೆ ಮಳೆ ನಿರಂತರವಾಗಿ ಬರುತ್ತಲೇ ಇರುತ್ತದೆ. ಇದರ ಒಂದು ಅನುಭವವನ್ನು ವಿವರಿಸಿದ್ದಾರೆ. ಇಲ್ಲಿ ಮಳೆಯು ಗಾಳಿಗೆ ಕಾರಿಡಾರಿಗೆ ಬಂದ ಮೇಷ್ಟ್ರರಿಗೆ ತಾಗಿ ಅವರ ಶಾಪಕ್ಕೆ ಗುರಿಯಾಗುತ್ತಿದೆ ಎಂದು ಹೇಳುತ್ತಾರೆ. ಹೀಗೆ ಮಳೆ ಕೆಲವರಿಗೆ ತೊಂದರೆಯನ್ನು ಕೊಡುವಂತಿದೆ ಎಂದಿದ್ದಾರೆ. ಮುಂದುವರೆದು ಮಳೆ ಎಂಬ ಕವನದಲ್ಲಿ...

"ಚಿತ್ತ ದಿಳೆಯಾಳದಲಿ ಗತ ಅನುಭವದ ಬಿತ್ತಗಳ
ಮೊಳೆಸಿ ನೆನಪಿನ ಫಸಲ ತೂಗಿದೆ ಮಳೆ
ಮತ್ತೆ ಬರ ಬಾರದೆ ಹಿಗ್ಗೆರೆದ ಹಳೆಗಾಲ
ಎಂದು ಹಪ ಹಪಿಸುವ ತೆರದಿ ಕಾಡಿದ ಮಳೆ"[೧೦]

ಮಳೆಯು ನೆನಪಿನ ಆಳದಲ್ಲಿ ಮರೆತು ಹೋದಂತಹ ಅನೇಕ ಅನುಭವಗಳನ್ನು ಮೊಳಸಿ ನೆನಪಿನ ಫಸಲ ತೂಗಿದೆ ಎಂದಿದ್ದಾರೆ. ಎಂದರೆ ಮಳೆಯು ಮನುಷ್ಯನ ಹಿಂದಿನ ಅನುಭಗಳನ್ನೆಲ್ಲ ಮತ್ತೆ ನೆನಪಿಸುತ್ತದೆ. ಆ ಅನುಭವ ಹೇಗಿದೆ ಎಂದರೆ ಹಳೆಯ ಕಾಲವು ಮತ್ತೆ ಬರಬಾರದೆ ಎನ್ನುತ್ತಿದೆ ಮನಸ್ಸು. ಹಳೆಯ ಅನುಭವಗಳ ನೆನಪನ್ನು ತರುವ ರೂವಾರಿಯಾಗಿ ಮಳೆ ಕೆಲಸ ಮಾಡುತ್ತಿದೆ. ಅದು ಕೇವಲ ನೆನಪಿಗೆ ತಂದಿಲ್ಲ ಮತ್ತೆ ಮತ್ತೆ ಆ ಕಾಲಬೇಕೆಂದು ಅರಸುವಂತೆ ಮಾಡಿದೆ ಎಂದಿದ್ದಾರೆ.

ಮುಂದುವರೆದು...

"ಒಂದೊಂದು ದೃಶ್ಯವನು ಕಣ್ಣಿನ ಮುಂದೆ
ಸಂದ ಆನಂದವನು ಮರುಕಳಿಸಿದೆ ಮಳೆ
ಮುಂಬಾಳ ಪಯಣವನು ಸಹ್ಯಗೊಳಿಸಲಿಕೆಂದೆ
ಸಿಹಿ ನೆನಪ ಬುತ್ತಿಯನು ಅಣಿಗೊಳಿಸಿದೆ ಮಳೆ"[೧೧]

ಮಳೆಯು ಹಿಂದಿನ ನೆನಪುಗಳನ್ನು ತರುವ ಮೂಲಕ ಒಂದೊಂದು ದೃಶ್ಯವು ಕಣ್ಣಿಗೆ ಕಟ್ಟಿದಂತಿದೆ. ಅದು ಹಿಂದಿನ ಆನಂದವನ್ನು ಮತ್ತೆ ಅನುಭವಿಸುವಂತೆ ಮರುಕಳಿಸುವಂತೆ ಮಾಡಿದೆ. ಮುಂದಿನ ಬಾಳಿನ ಪಯಣವನ್ನು ಸಹ್ಯ ರೀತಿಯಲ್ಲಿ ಹಿತಕರವಾಗಿಸಲು ಈ ರೀತಿ ಮಾಡಿದೆ. ನಮ್ಮ ಸಿಹಿ ನೆನಪಿನ ಬುತ್ತಿಯನ್ನು ಅಣಿಗೊಳಿಸಿದೆ ಎಂದಿದ್ದಾರೆ. ಮುಂದುವರೆದು ಮಳೆಯು ಎಲ್ಲಾ ಅನುಭವಗಳನ್ನು ನೆನಪಿಗೆ ತಂದು ಸವಿಯಾದ ಸರಸಗಳ ನೆನಪನ್ನು ತಂದು ಮೈನವಿರೇಳುವಂತೆ ಮಾಡಿದೆ. ಜೀವನದ ಅನುಭವಗಳನ್ನು ಮತ್ತೆ ಮತ್ತೆ ಕೆದಕಿ ಸುಂದರವಾದ ನೋವಿನಿಂದ ಮನಸ್ಸಿನಲ್ಲಿ ಹೊಸ ಹೊಸ ಭಾವನೆಗಳನ್ನು ಮಳೆ ಬೆಳಸಿದೆ ಎಂದಿದ್ದಾರೆ. ಮುಂದುವರೆದು

"ಎದೆ ಬಿಗಿದ ಬಂಧಗಳ ಮುಗಿದ ಸಂಬಂಧಗಳ
ಮರೆತನೆಂದರು ಮರೆಗೊಡದ ಮಳೆ
ಚಿಸೆದೊಲವ ಅಂಚುಗಳ ಕಿತ್ತೆದಸದ ಸಂಚುಗಳ
ಬೇಡವೆಂದರು ಮೆರೆಸಿ ಜಡಿದಿದೆ ಮಳೆ"[೧೨]

ಅಂದರೆ ಮಳೆಯು ತಮ್ಮ ಜೀವನದ ಅನೇಕ ಸಿಹಿ ನೆನಪುಗಳನ್ನು ತರುತ್ತಿದೆ. ಅದರೊಂದಿಗೆ ಕಠಿಣಗೊಂಡ ಬಂಧಗಳು ದೂರವಾದ ಸಂಬಂಧಗಳು ಮರೆತರು ಅಥವಾ ಮರೆಯಲು ಪ್ರಯತ್ನಿಸಿದರು ಮಳೆ ಮತ್ತೆ ನೆನಪಿಗೆ ತರುತ್ತಿದೆ. ಒಲವಿನಿಂದ ಕೂಡಿದ ಸಂಬಂಧಗಳನ್ನು ಕಿತ್ತೆಸೆದ ಸಂಚುಗಳು ಬೇಡ ಅವುಗಳ ನೆನಪುಗಳನ್ನು ಈ ಜಡಿಮಳೆ ಮರೆಸುತ್ತಿದೆ ಎಂದಿದ್ದಾರೆ. ಮುಂದುವರೆದು...

"ಸುಖ-ದುಃಖ ಲಾಳಿಗಳ ಬಾಳ ಮಗ್ಗದೊಳಿಳಿಸಿ
ಹಳಹಳಿಕೆ ಅರಿವೆನು ನೆಯ್ದಿದ್ದ ಮಳೆ
ಎಂದೋ ಭೂಗತೆಸಿರುವ ಕಳೆಯ ಪಳೆಯುಳಿಕೆಯನು
ಸುಪ್ರಾಣಿಸುತ ಒಂದೇ ಸಮ ಹೊಯ್ದಿದೆ ಮಳೆ"[೧೩]

ಸುಖ-ದುಃಖ ಲಾಳಿಗಳ ಬಾಳ ಮಗ್ಗದೊಳಿಳಿಸಿ ಎಂದರೆ ಸುಖ-ದುಃಖ ಎರಡು ಜೀವನಕ್ಕೆ ಅವಶ್ಯಕ ಅವೆರಡನ್ನು ಮಳೆ ರೂಪಿಸಿದೆ, ನೆನಪಿಸಿದೆ. ನಮ್ಮ ಮನಸ್ಸಿನ ಹಳಹಳಕೆಯನ್ನು ಮಳೆ ಸಾಕಾರಗೊಳಿಸಿದೆ ಎಂದಿದ್ದಾರೆ. ಎಂದೋ ಭೂಗತಿಸಿರುವ ಕೇಳಿರುವ ಅನುಭವಗಳ ಪಳೆಯುಳಿಕೆಗಳನ್ನು ಮತ್ತು ಪ್ರಮಾಣೀಕರಿಸುವ, ವಿವರಿಸುವ ಕೆಲಸವನ್ನು ಮಳೆಯೇ ನಿರ್ವಹಿಸಿದೆ. ಅದು ಒಂದೇ ಸಮನೆ ಹೊಯ್ಯುವ ಮೂಲಕ ಎಂದಿದ್ದಾರೆ.

ಈ ಕವನದಲ್ಲಿ ನಿಸ್ಸಾರ ಅಹಮ್ಮದ್ ಅವರು ಮಳೆ ಬಂದ ಪರಿಣಾಮ : ಜನರ ಮೇಲೆ ಎಂಬುದಕ್ಕಿಂತ ಜನರ ಮನಸ್ಸನ್ನು ಯಾವ ರೀತಿಯ ಅನುಭವಗಳನ್ನು ತೆರೆದಿಡುತ್ತದೆಂಬುದನ್ನು ವಿವರಿಸಿದ್ದಾರೆ. ಆ ಮೂಲಕ ಜನರ ಮೇಲಿನ ಪರಿಣಾಮಕ್ಕೆ ಭಿನ್ನವಾಗಿ ಜನರ ಮನಸ್ಸಿನ ಮೇಲೆಯು ಮಳೆ ಪರಿಣಾಮ ಬೀರುತ್ತದೆ ಎಂಬುದನ್ನು ವಿವರಿಸುವ ಪ್ರಯತ್ನ ಮಾಡಿದ್ದಾರೆ.

ವಸುದೇವ ಭೂಪಾಲಂ ಅವರು "ರಂಜನ" ಕವನ ಸಂಕಲನದ ಮಳೆ ಎಂಬ ಕವಿತೆಯಲ್ಲಿ ಮಳೆಯ ಪರಿಣಾಮ ಜನರ ಮೇಲೆ ಯಾವ ರೀತಿಯಲ್ಲಾಯಿತೆಂಬುದನ್ನು ವಿವರಿಸುವ ಪ್ರಯತ್ನ ಮಾಡಿದ್ದಾರೆ. ಅವರು ಸೂರ್ಯನಿಂದ ಹೀರಲ್ಪಟ್ಟ ನೀರು ಮೋಡವಾಗಿ ತೆಲುತ್ತಿತ್ತು ಎಂದು ಹೇಳುತ್ತಾ ಮುಂದುವರೆದು

"ಬಿಳಿ ಮುಗಿಲಿನ ನಡು ಕಾರ್ಮೋಡದ ಪರಿ
ತಳ್ಳಿಯಾಡಿತ್ತು
ಮನುಜನ ಪಾಡನು ನೋಡುತ ಬಾನು
ಮೆಲ್ಲನತ್ತಿತ್ತು
ಯುದ್ಧಾಘಾತದ ದೃಷ್ಟಿಸಿ ಬೆಚ್ಚಿ
ರಕ್ತ ಸುರಿಸಿತ್ತು
ನಸುವೆ ನಕ್ಕಿತ್ತು"[೧೪]

ಬಿಳಿಯ ಮುಗಿಲಿನ ನುಡು ಕಾರ್ಮೋಡದ ಪರಿ ತಳ್ಳಿಯಾದಿತು. ಅದು ಮುಗಿಲಿನ ನಡುವಿರುವ ಕಾರ್ಮೋಡ ತಿಳಿಯಾಗಿ ಕರಗಲು ಸಿದ್ಧವಾಗಿತ್ತು. ಭೂಮಿಗೆ ಮಳೆಗರೆಯಲು ಮನುಜನ ಪಾಡನು ನೋಡುತ ಬಾನು ಮೆಲ್ಲನೆನುತ್ತಿತ್ತು. ಮಳೆಯು ಸಹ ಮನುಷ್ಯನನ್ನು ಕುರಿತು ವಿಚಾರ ಮಾಡುತ್ತಿತ್ತು ಎಂದಿದ್ದಾರೆ. ಯುದ್ಧಾಘಾತವನ್ನು ನೋಡಿ ಹೆದರಿ ರಕ್ತದಂತೆ ಸುರಿಸಿತ್ತು ಎಂದಿದ್ದಾರೆ. ಆ ಮೂಲಕ ಮೋಡ ಮಳೆಯನ್ನು ಧಾರಾಕಾರವಾಗಿ ಸುರಿಸಿತ್ತು. ಮಳೆ ಭೂಮಿಯ ಮೇಲಿನ ಹಸಿರನ್ನು ಕಂಡು ನಸುನಕ್ಕಿತ್ತು ಎಂದಿದ್ದಾರೆ. ಮಳೆ ಮತ್ತು ಮನುಷ್ಯರ ನಡುವೆ ಸಂಭಾಷಣೆ ಇದೆ ಎಂಬಂತೆ ಮಳೆ ಪರಿಣಾಮಕಾರಿ ಎಂದಿದ್ದಾರೆ.

ಮುಂದುವರೆದು...

"ಆಗಸ ದೇವಿಗೆ ಸಂತಸವಾಗಲು
ಬಾಷ್ಪವುದುರಿತ್ತು
ಹೊಲಸಾಯಿತು ಬುವಿ ಎನ್ನುವ ಬಂದು
ಸುಯ್ಯನೆ ಸೇದಿತು
ಮಾನವ ಹೃದಯ ಕೊಳೆಯನು ತೊಳೆಯಲು ನೀರುನು ತಂದಿತು"[೧೪]

ಆಕಾಶಕ್ಕೆ ಸಂತಸವಾದ್ದರಿಂದ ಬಾಷ್ಪವು ಉದಿರಿತ್ತು. ಅಂದರೆ ಆಗಸಕ್ಕೆ ಆದ ಸಂತೋಷದಿಂದ ಭುವಿಗೆ ಮಳೆ ಸುರಿಯಿತು. ಹೊಲಸಾಯಿತು ಭುವಿ. ಅಂದರೆ ಕೊಳೆಯಾಯಿತು ಎನ್ನುತ್ತಾ ಅದನ್ನು ಶುದ್ಧೀಕರಿಸಲು ಸುಯ್ಯೆಂದಿತು. ಮಳೆಯು ಮಾನವನ ಹೃದಯ ಕೊಳೆಯನು ತೊಳೆಯಲು ನೀರು ತಂದಿತು. ಮಳೆ ಕೇವಲ ಜಗತ್ತಿನಷ್ಟೆ ಅಲ್ಲದೆ ಮನುಷ್ಯರ ಮನಸ್ಸಿನ ಕೊಳೆಯನ್ನು ತೊಳೆಯಲು ಬರುತ್ತಿತ್ತು ಎಂಬುದನ್ನು ತಿಳಿಸಿದ್ದಾರೆ. ಹೀಗೆ ಮಳೆಯ ಪರಿಣಾಮ ವಿಶಾಲತೆಯನ್ನು ಪಡೆದುಕೊಳ್ಳುತ್ತದೆ. ಮಳೆ ಕೇವಲ ಜನರ ಕೆಲಸಗಳಿಗಷ್ಟೆ ಅಲ್ಲ ಅವರ ಮನಸ್ಸನ್ನು ಶುದ್ಧಗೊಳಿಸಲು ಮಳೆ ಬಂದಿದೆ ಎಂಬ ವಿಶ್ವಾತ್ಮಕ ಸ್ವರೂಪವನ್ನು ವಿವರಿಸಿದ್ದಾರೆ.

ಅಮರನಾಥ ಅವರು ತಮ್ಮ 'ಹತ್ತರೊಳಗೆ ಹನ್ನೊಂದು' ಕವನ ಸಂಕಲನದಲ್ಲಿ 'ಮಳೆಗಾಲದ ಕವಿತೆ' ಕವನದಲ್ಲಿ ಮಳೆ ಬಂದ ಪರಿಣಾಮ ಜನರ ಮೇಲೆ ಹೇಗಾಗುತ್ತದೆಂಬುದನ್ನು ಕಟ್ಟಿಕೊಡುವ ಪ್ರಯತ್ನ ಮಾಡಿದ್ದಾರೆ. ಅದು...

"ಸಂಜೆಯಾಗಸದಲಿ ಬಣ್ಣದೋಕಳಿಯಿಲ್ಲ
ಹುಣ್ಣಿಮೆಯ ಇರುಳಲ್ಲಿ ಹಾಲು ಚೆಲ್ಲುವುದಿಲ್ಲ
ಕೋಟಿಗಟ್ಟಲೆ ಚುಕ್ಕೆ ಕಣ್ಣು ಹೊಡೆಯುದಿಲ್ಲ
ತೊಪ್ಪೆಗಂಬಳಿ ಹೊದ್ದು ದನ ಮೇಯಿಸುವವ
ನೋಡುತ್ತಾನೆ ದನದ ಬಾಯಿಗೆ ಹುಲ್ಲು
ಹತ್ತುವುದೇ ಇಲ್ಲ ನೀರೋ ನೀರು
ಕಟ್ಟೆಗಳು ಒಡೆಯುತ್ತಿವೆ ಗುಡ್ಡಗಳು ಕುಸಿಯುತ್ತಿವೆ
ಗುಡಿಸಿಲ ಗೋಡೆಗಳು ಕರಗಿ ನೀರಾಗುತ್ತಿವೆ"[೧೫]

ಮಳೆ ಬಂದ ಪರಿಣಾಮ ಹೇಗಿದೆ ಎಂದರೆ ನಿತ್ಯದಂತೆ ಸಂಜೆಯಲ್ಲಿ ಬಣ್ಣದೋಕುಳಿಯಿಲ್ಲ ಬದಲಾವಣೆಯಾಗಿದೆ. ಹುಣ್ಣಿಮೆಯ ಇರುಳಲ್ಲಿ ಹಾಲು ಚೆಲ್ಲುವುದಿಲ್ಲ ಹುಣ್ಣಿಮೆಯ ದಿನವು ಮಳೆಯ ಮೊಡದಿಂದ ಕತ್ತಲು ಆವರಿಸಿದೆ. ಕೋಟಿಗಟ್ಟಲೆ ಚುಕ್ಕೆ ಕಣ್ಣು ಹೊಡೆಯುವುದಿಲ್ಲ. ಅಂದರೆ ಒಂದು ನಕ್ಷತ್ರವು ಕಾಣುತ್ತಿಲ್ಲ ಎಂದಿದ್ದಾರೆ. ತೊಪ್ಪೆಗಂಬಳಿ ಹೊದ್ದು ದನ ಮೇಯಿಸುವವ ನೋಡುತ್ತಾನೆ. ದನ ಬಾಯಿಗೆ ಹುಲ್ಲು ಹತ್ತುವುದೇ ಇಲ್ಲ. ಎಂದರೆ ಮಳೆಯ  ಪರಿಣಾಮ ಜನರನ್ನು ದನ ಮೇಯಿಸಲು ಬಿಡುತ್ತಿಲ್ಲ. ದನಕ್ಕು ಹುಲ್ಲು ಸಿಗುತ್ತಿಲ್ಲವೆಂಬುದನ್ನು ದನದ ಬಾಯಿಗೆ ಹತ್ತುವುದೇ ಇಲ್ಲ ಎಂದಿದ್ದಾರೆ. ಮಳೆ ಬಂದಿದ್ದರಿಂದ ಎಲ್ಲಾ ಕಡೆಗಳಲ್ಲೂ ನೀರೆ ನೀರು. ಈ ನೀರಿನಿಂದ ಕಟ್ಟೆಗಳು ಒಡೆಯುತ್ತಿವೆ, ಗುಡ್ಡಗಳು ಕುಸಿಯುತ್ತಿವೆ, ಗುಡಿಸಿಲ ಗೋಡೆಗಳು ಕರಗಿ ನೀರಾಗುತ್ತಿವೆ. ಮಳೆ ಬಂದಿದ್ದರಿಂದ ಮನುಷ್ಯನ ಸುತ್ತಲ ವಾತಾವರಣದಲ್ಲಿ ಅನೇಕ ಬದಲಾವಣೆಗಳಾಗುತ್ತಿವೆ. ಎಲ್ಲೆಡೆಯು ನೀರು ಹಬ್ಬಿ ಕೆರೆಕಟ್ಟೆಗಳು ಒಡೆದು ಗುಡ್ಡಗಳು ಕುಸಿಯುತ್ತಿವೆ. ಮನೆಗಳು ಅವುಗಳ ಗೋಡೆಗಳು ಕರಗಿ ನೀರಾಗಿವೆ ಎಂದು ಹೇಳಿದ್ದಾರೆ. ಇಡೀ ಕವನದಲ್ಲಿ ಮಳೆ ಬಂದಿದ್ದರಿಂದ ಮನುಷ್ಯನ ಸುತ್ತಲಿನ ವಾತಾವರಣದ ಮೇಲೆ ಮಳೆ ಬೀರಿದ ಪರಿಣಾಮವೇನೆಂಬುದನ್ನು ಸರಳವಾಗಿ ಅರ್ಥೈಸುವಂತೆ ಅಭಿವ್ಯಕ್ತಪಡಿಸಲಾಗಿದೆ. ಈ ಮೂಲಕ ಮಳೆಯ ಪರಿಣಾಮ ಜನರ ಮೇಲಾದ ಬಗೆಯನ್ನು ವಿವರಿಸುವ ಪ್ರಯತ್ನ ಮಾಡಿದ್ದಾರೆ.

ಮಮತಾ ಜಿ. ಸಾಗರ ಅವರು 'ಹೀಗೆ ಹಾಳೆಯ ಮೇಲೆ ಹಾಡು' ಎಂಬ ಕವನ ಸಂಕಲನದ ಮಳೆ ಎಂಬ ಕವನದಲ್ಲಿ ಮಳೆ ಬಂದ ಪರಿಣಾಮ ಜನರ ಮೇಲೆ ಹೇಗಾಗಿದೆ ಎಂಬುದನ್ನು ವಿವರಿಸಿದ್ದಾರೆ.

"ಮುಸು ಮುಸು ಅಳುವ ಮನಸ್ಸಿನ ಹಾಗೆ
ನಿಂತು ನಿಂತು ಬಿಕ್ಕುವ ಮಳೆ
ದುಗುಡು ದುಮ್ಮಾನದಾಲಿ ಕಲ್ಲು
ಭೋರ್ಗರೆವ ಮಳೆ
ದುಃಖ ಉಮ್ಮಳಿಸಿ ಧೋ ಅಂತ
ಸುರಿವ ಸೋನೆ ಮಳೆ
ಹಚ್ಚುವ ಸೂಜಿ-ದಾರದೆಳೆ ಮಳೆ
ನನ್ನ ಹಾಡಿನ ಜಾಡು
ಜಡಿ ಮಳೆ"[೧೬]

ಮಳೆ ಹೇಗೆ ಬರುತ್ತಿದೆ ಎಂದರೆ ಮುಸು ಮುಸು ಅಳುವ ಹಾಗೆ. ಅಂದರೆ ಮನಸ್ಸಿನಲ್ಲಿ ಅನೇಕ ನೋವುಗಳಿಂದ ಮನಸ್ಸು ನೊಂದಿದೆ. ಅದರಂತೆ ಮಳೆಯು ಬರುತ್ತಿದೆ. ದುಗುಡ ದುಮ್ಮಾನಗಳು ಅಂದರೆ ಮನಸ್ಸಿನಲ್ಲಿ ಭಯ, ಆತಂಕಗಳ ರೀತಿಯಲ್ಲಿ ಆಲಿಕಲ್ಲು ಸುರಿದಂತೆ ಭೋರ್ಗರೆವ ಮಳೆ, ದುಃಖ ಹೆಚ್ಚಾಗಿ ಧೋ ಎಂದು ಸುರಿವ ಮಳೆ ಮತ್ತು ಜೋಡಿಸುವ ಸೂಜಿ-ದಾರದೆಳೆ ಮಳೆ ನನ್ನ ಹಾಡಿನ ಜಾಡು ಜಡಿಮಳೆ. ಅಂದರೆ ಮಳೆಯನ್ನು ಸಂಪೂರ್ಣ ದುಖಃಭರಿತ ಭಾವನೆಗಳೊಂದಿಗೆ ಹೋಲಿಸಲಾಗಿದೆ. ಮಳೆಯನ್ನು ಅತ್ಯಂತ ದುಃಖದಿಂದ ಚಿತ್ರಿಸಲಾಗಿದೆ. ಅದು ಮನುಷ್ಯರ ಮನಸ್ಸಿನಂತೆ, ಮನುಷ್ಯರ ಸ್ವರೂಪವೇ ಎಂಬಂತೆ ಮಮತಾ ಅವರು ಚಿತ್ರಿಸಲು ಪ್ರಯತ್ನಿಸಿದ್ದಾರೆ. ಒಟ್ಟಾರೆ ಮಳೆ ಕುರಿತ ಭಿನ್ನ ಅಭಿಪ್ರಾಯ ಅಭಿವ್ಯಕ್ತಿಕ್ರಮ ಇಲ್ಲಿದೆ.

ಕೃಷ್ಣಮೂರ್ತಿ ಬಿಳಿಗೆರೆಯವರು ತಮ್ಮ 'ಕಿಂಚಿತ್ತು ಪ್ರೀತಿಯ ಬದುಕು' ಎಂಬ ಕವನ ಸಂಕಲನದ "ಮುಂಗಾರು ಮಳೆ ಬಂತು" ಎಂಬ ಕವನದಲ್ಲಿ ಮಳೆ ಬಂದ ಪರಿಣಾಮ ಜನರ ಮೇಲೆ ಹೇಗಾಗಿದೆ ಎಂಬುದನ್ನು ಕಟ್ಟಿಕೊಡುವ ಪ್ರಯತ್ನ ಮಾಡಿದ್ದಾರೆ. ಅವರು ಬೆಂದು ಹಯಲಾದಂತಹ ಹಾದಿಯಲ್ಲಿ ಧೂಳೆಲ್ಲ ಮಾಯವಾಗಿದೆ. ಆಡುವ ಹುಡುಗನ ನೆತ್ತಿ ದಾರಿಯಿಂದ ನುಗ್ಗಿದೆ ಎನ್ನುತ್ತಾರೆ. ಅದನ್ನು

"ಬೆವರು ಹನಿ ನೆಲಕೆ ಬಿತ್ತು ಆ ಹೊತ್ತು
ಅವ್ವನಂಟು ಮೈ ಅವುಚಿಕೊಂಡಲ್ಲೆ ಬೆವೆತು
ಆವಿಯಾಗುತಿತ್ತ ಕೂಸು"[೧೭]

ಅಂದರೆ ಮಳೆ ಬರದೆ ಇದ್ದಂತಹ ಸಂದರ್ಭದಲ್ಲಿನ ಒಂದು ನೆನಪನ್ನು ಹಂಚಿಕೊಳ್ಳುತ್ತಾ ಅದನ್ನು ನೆನಪಿಸಿಕೊಳ್ಳುತ್ತಿದ್ದಾರೆ. ಬೆವರ ಹನಿ ನೆಲಕ್ಕೆ ಬಿತ್ತು. ಆ ಹೊತ್ತು ಅವ್ವನಂಟು ಮೈ ಅಂದರೆ ಶ್ರಮ ವಹಿಸಿದ ಜನರ ಮೈಯಲ್ಲಿ ಬೆವರು ಬರುವುದು. ಅಂತೆಯೆ ನನ್ನ ತಾಯಿಯು ಕಷ್ಟಪಡುತ್ತಿದ್ದಾಳೆಂಬ ಭಾವ ಇರುವುದನ್ನು ಕಾಣಬಹುದು. ಬೆವರು ಅವಿಚಿಕೊಂಡಲ್ಲೆ ಬೆವೆತು ಆವಿಯಾಗುತ್ತಿತ್ತು ಕೂಸು ಎಂದಿದ್ದಾರೆ. ಮುಂದುವರೆದು,

"ಊರ ಮೇಲಿನಾಕಾಶ ಉರಿಯುತಿತ್ತು
ಏರಿ ಹಿಂದೆ ಹೆಣ ಸುಡುವ ಜಾಗ ಹೊತ್ತಿಕೊಳ್ಳುತ್ತಿತ್ತು
ಆಗ ತಾನೆ ಹುಟ್ಟಿದ ಎಮ್ಮೆಕರು ಮೊಲೆ ಹುಡುಕುತ್ತಿತ್ತು
ಮುಂಗಾರು ಮಳೆ ಬಂತು ಮರು ಜೀವತಂತು"[೧೮]

ಮಳೆ ಬರದೆ ಇದ್ದಾಗ ಆಕಾಶ ಉರಿಯುತಿತ್ತು. ಸೂರ್ಯನ ಶಾಖದಿಂದ ಆ ಶಾಖ ಎಷ್ಟು ಪ್ರಭಾವಿಸಿತ್ತೆಂದರೆ ಅದರ ಶಾಖಕ್ಕೆ ಹೆಣ ಸುಡುವ ಜಾಗ ಹೊತ್ತಿಕೊಳ್ಳುತಿತ್ತು. ಆಗ ತಾನೆ ಹುಟ್ಟಿದ ಎಮ್ಮೆ ಕರು

ಮೊಲೆಯನ್ನು ಹುಡುಕುತ್ತಿತ್ತು. ಇಲ್ಲಿ ಕವಿ ಎರಡು ಹೋಲಿಕೆಗಳನ್ನು ತಂದಿದ್ದಾನೆ. ಹೆಣ ಸುಡುವ ಜಾಗ ಮತ್ತು ಆಗ ತಾನೆ ಹುಟ್ಟಿದ ಎಮ್ಮೆ ಕರುಗಳನ್ನು ರೂಪಕವಾಗಿ ಬಳಸಿದ್ದಾರೆ. ಇಲ್ಲಿ ಹುಟ್ಟು ಮತ್ತು ಸಾವುಗಳ ಸಂಘರ್ಷದ ನಡುವೆ ಮುಂಗಾರು ಮಳೆ ಬಂತು. ಮರುಜೀವ ತಂದಿತು ಎಂದು ಹೇಳಿ ಅಂತ್ಯಗೊಳಿಸುತ್ತಾರೆ. ಒಂದು ಕಡೆ ತನ್ನ ಜೀವವನ್ನು ಉಳಿಸಿಕೊಳ್ಳಲು ಎಮ್ಮೆ ಕರು ಕಾರ್ಯೋನ್ಮುಖವಾದರೆ ಜೀವನದ ಅಂತ್ಯ ಸ್ಥಳವು ಕಾರ್ಯೋನ್ಮುಖವಾಗುತ್ತದೆ. ಎರಡು ಸ್ಥಳಗಳಿಗೆ ಮಳೆ ಬಂದರೆ ಮರುಜೀವ ಬರುತ್ತದೆ ಎಂದಿದ್ದಾರೆ. ಹೀಗೆ ಮಳೆಯು ಬಂದ ಪರಿಣಾಮ ಜನರ ಮೇಲಾಗುತ್ತದೆ ಎಂಬುದನ್ನು ಬಿಳಿಗೆರೆ ಕೃಷ್ಣಮೂರ್ತಿ ಅವರು ವಿವರಿಸಿದ್ದಾರೆ.

ಬಿ. ಸಿ. ರಾಮಚಂದ್ರಶರ್ಮ ಅವರು ತಮ್ಮ ಮಳೆ ಬಂತು ಎಂಬ ಕವನದಲ್ಲಿ ಮಳೆ ಬಂದ ಪರಿಣಾಮ ಜನರ ಮೇಲೆ ಆಗಿರುವುದನ್ನು ಗುರುತಿಸಿದ್ದಾರೆ.

"ಒಲವ ಕರೆಗೊಪ್ಪಿ
ಮಹಾತಿ ಶಬರಿಯ ಬಳಿಗೆ ಬಂದು ನಿಂತನೋ ರಾಮ!
ಆ ರಾಮನಂತೆ
ನೊಂದ ಮಗುವಿನ ಕಣ್ಣ ನೀರನೊರಸಲು ಬರುವತಾಯ
ಮೃದು ಹಸ್ತದಂತೆ
ಕಂಗಳಿಗೆ ಬರುವ ತೂಕಡಿಕೆಯಂತೆ
ಒಂಟಿ ಬಾಳೊಳು ಸುಳಿವ ಪ್ರೇಮದನುಭವದಂತೆ
ಬೆಂಡಾದ ನೆಲದೊಲವ ಕರೆಯ ಮನ್ನಿಸಿದಂತೆ
ಮಳೆ ಬಂತು, ಬಂತು"[೨೦]

ಮಳೆಯು ಬಂದ ಪರಿಣಾಮವನ್ನು ಕುರಿತು ರಾಮಚಂದ್ರಶರ್ಮ ಅವರು ಈ ರೀತಿ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಮಳೆಯು ಹೇಗೆ ಬಂತೆಂದರೆ ಶಬರಿಯ ಕರೆಗೆ ಓಗೊಟ್ಟು ರಾಮ ಬಂದಂತೆ ಮಳೆ ಬಂದಿತು. ಶಬರಿಗೆ ಸಂತೋಷಗೊಳಿಸಿ ಅವಳ ಆಸೆಯನ್ನು ತೀರಿಸಲು ನೊಂದ ಮಗುವಿನ ಕಣ್ಣೀರನ್ನು ಒರೆಸಲು ಬರುವ ತಾಯಿಯ ಹಸ್ತದಂತೆ ಮಳೆ ಬಂತು. ಜನರಿಗೆ ಸಾಂತ್ವನ ಹೇಳಲು, ದುಡಿದು ಸುಸ್ತಾದ ಕಣ್ಣುಗಳಿಗೆ ಬರುವ ನಿದ್ದೆಯಂತೆ ಒಬ್ಬಂಟಿ ಬಾಳಲ್ಲಿ ಸುಳಿವ ಪ್ರೇಮದ ಅನುಭವದಂತೆ ಮಳೆ ಬಂದಿತು. ಬೆಂಡಾದ ನೆಲದೊಡಲ ಕರೆಯ ಮನ್ನಿಸಿದಂತೆ ಮಳೆ ಬಂದಿತು. ಆ ಮೂಲಕ ಜನರ ಜೀವನಕ್ಕೆ ದಾರಿಯಾಯಿತು ಎಂದಿದ್ದಾರೆ.

ಮುಂದುವರೆದು....

"ಕುಣಿದು ಕುಣಿದು ಬಂತು ಮಳೆ ಮಲೆಯ ಕಡೆಯಿಂದ
ಆನಂದದಿಂದ!
ನಗುನಗುತ ನೆಲವೆದ್ದು ಪ್ರೇಮ ಸಂಭ್ರಮದಲ್ಲಿ
ಮಳೆಗಿತ್ತ ಸ್ವಾಗತವು ಅಂದಚೆಂದ
ಅರಮನೆಯ ಮೇಲೆ ಮಳೆರಾಯ ಲೀಲೆಯಾಡಿತು ಅಂತೆ
ಗುಡಿಸಲು ಸೆರಮನೆಯ ಮೇಲೆ
ಕಿಟಕಿ ಬಳಿನಿಂತು ಪಿಸು ಮಾತನಾಡಿದ ಮಳೆಯ
ಹರಿದಿತ್ತು ಬಚ್ಚಲೊಳು ಗಳಿಗೆಯಲ್ಲೆ
ಮುಳುಗಿ ಹೊಳೆಯಾಗಿ ಹರುಷ ಎಳಿಗಿಳಿಯಿತ್ತೊ
ಮಳೆಬಂತು"[೨೧]

ಮಳೆಯು ಬರುತ್ತಿದೆ ಗುಡ್ಡ-ಬೆಟ್ಟಗಳ ಕಡೆಯಿಂದ ನೀರು ಹರಿದು ಬರುತ್ತಿದೆ. ಆನಂದದಿಂದ ಈ ಮಳೆಯ ಬರುವಿಕೆಗೆ ನಗುತ್ತಲೇ ನೆಲವು ನೀಡಿದ ಸ್ವಾಗತವು ಅತ್ಯಂತ ಸುಂದರವಾಗಿತ್ತು. ಈ ಮಳೆಯು ಅರಮನೆಗಳ ಮೇಲೆಯು ಬಂದಿತು. ಮಳೆಯು ಕಿಟಕಿಯ ಬಳಿಯಲ್ಲಿ ಬಂದು ಮಾತನಾಡಿದ ಮಳೆ ಅದು ಹರಿದು ಹೋಗಿತ್ತು. ಕ್ಷಣ ಮಾತ್ರದಲ್ಲಿ ಮಳೆಯೋ, ಹರುಷವೋ ತಿಳಿಯದಂತೆ ಈ ಮಳೆ ಬಂದಿತು. ಹೀಗೆ ಮಳೆಯು ಆನಂದವನ್ನು ತಂದಿತು.

ಒಟ್ಟಾರೆಯಾಗಿ ರಾಮಚಂದ್ರಶರ್ಮ ಅವರು ಮಳೆ ಬಂದ ಪರಿಣಾಮ ಜನರ ಮೇಲಾಗಿರುವುದನ್ನು ಅತ್ಯಂತ ಭಾವುಕತೆಯಿಂದ ಸೂಕ್ಷ್ಮವಾಗಿ ಕಟ್ಟಿಕೊಟ್ಟಿದ್ದಾರೆ. ಮಳೆ ನೆಲದ ಒಲವಿನ ಕರೆಯನ್ನು ಮನ್ನಿಸಿ ಬಂದಿತು, ಅದು ಕುಣಿಯುತ್ತಾ ಬಂದಿತು. ಜನರ ನಡುವಿನ ಬೇಧವನ್ನು ತೊಡೆದು ಬಂದಿತು. ಹಾಗೆಯೆ ಎಲ್ಲವನ್ನು ಸ್ವಚ್ಛಗೊಳಿಸಿ ಹರಿದು ಹೋಯಿತು. ಮಳೆ ಭೂಮಿಗೆ ಹರುಷವನ್ನು ತಂದಿತು ಎಂದು ಹೇಳುತ್ತಾರೆ.

ಮಳೆ ಬಂದ ಪರಿಣಾಮವು ಮನುಷ್ಯರನ್ನು ತಮ್ಮ ಜೀವನ ಕಟ್ಟಿಕೊಳ್ಳಲು ಮತ್ತು ನಾಶವಾಗಲು ಎರಡು ರೀತಿಯಾಗಿರುವುದರ ಬದಲಾಗಿ ಜನರ ಮನಸ್ಸಿನ ಭಾವನೆಗಳನ್ನು ಗೌರವಿಸುವ ರೀತಿಯಲ್ಲಿ ಕವಿಗಳು ಕಟ್ಟಿಕೊಟ್ಟಿದ್ದಾರೆ. ಮಳೆಯು ಜನರ ಸಂಬಂಧಗಳನ್ನು ಬೆಸೆಯುತ್ತದೆ. ಆದರೆ ಸಂಬಧಗಳಿಂದ ಮಳೆ ಬರುವುದಿಲ್ಲ, ಅದು ಪ್ರಕೃತಿಯು ನೀಡಿದ ಕೊಡುಗೆ. ಮಳೆಯು ತಮ್ಮ ಮನಸ್ಸಿನ ಭಾವನೆಗಳ ಮೇಲೆ ಗಾಢವಾದ ಪರಿಣಾಮವನ್ನು ಬೀರುತ್ತದೆ. ಮಳೆಯು ಬರುವ ಸಂದರ್ಭವು ಕಣ್ಣಿಗೆ ರಸದೌತಣವನ್ನು ನೀಡುತ್ತದೆ. ಆ ಸಂದರ್ಭದ ಪ್ರಕೃತಿಯ ಸೌಂದರ್ಯ ಅವರ್ಣನೀಯವಾದುದು. ಮಳೆ ಕೇವಲ ಜನರಿಗಲ್ಲ, ಇಡೀ ನಾಡಿಗೆ ಜಳಕವನ್ನು ಮಾಡಿಸುತ್ತದೆ. ಮನುಷ್ಯರ ಸುಖ-ದುಃಖಗಳೆಲ್ಲದಕ್ಕೂ ಮಳೆ ಕಾರಣವಾಗಿದೆ. ಮಳೆಯು ಜನರ ಜೀವನದ ಅವಿಭಾಜ್ಯ ಅಂಗವಾಗಿದ್ದು, ಜನರ ಹುಟ್ಟು-ಸಾವಿನ ಮೇಲೆ ಮರಿಣಾಮ ಬೀರುತ್ತದೆ ಎಂಬುದನ್ನು ಕವನಗಳ ವಿಶ್ಲೇಷಣೆಯಲ್ಲಿ ಕಂಡುಕೊಳ್ಳಬಹುದು.

**ಕೊನೆ ಟಿಪ್ಪಣಿಗಳು**

೧. ಶ್ರಾವಣದ ಸೆರಗು, ಲಿಲಾ ಕಲಕೋಟಿ, ಪುಟ ಸಂಖ್ಯೆ ೨೬
೨. ಅದೇ ಪುಟ
೩. ನನ್ನ ಪಾಡಿಗೆ ನಾನು, ಅಬ್ದುಲ್ ರಶೀದ್, ೩೮
೪. ಅದೇ ಪುಟ
೫. ಅದೇ ಪುಟ
೬. ತಾಣಾಂತರ, ಬಸವರಾಜು ಎಲ್. ಪುಟ ಸಂಖ್ಯೆ ೧೬೨
೭. ಸಮಗ್ರ ಕಾವ್ಯ, ಪು. ತಿ. ನ. ಪುಟ ಸಂಖ್ಯೆ ೩೦೩
೮. ಅದೇ ಪುಟ
೯. ಅದೇ ಪುಟ
೧೦. ಅದೇ ಪುಟ
೧೧. ಸಮಗ್ರ ಕಾವ್ಯ, ಕೆ.ಎಸ್. ನಿಸಾರ್ ಅಹಮದ್, ಪುಟ ಸಂಖ್ಯೆ ೯೧
೧೨. ಅದೇ ಪುಟ
೧೩. ಅದೇ ಪುಟ
೧೪. ಅದೇ ಪುಸ್ತಕ ಪುಟ ಸಂಖ್ಯೆ, ೯೨
೧೫. ರಂಜನ, ವಸುದೇವ ಭೂಪಾಲಂ ಪುಟ ಸಂಖ್ಯೆ ೩೬
೧೬. ಅದೇ ಪುಟ
೧೭. ಹತ್ತರೊಳಗೆ ಹನ್ನೊಂದು ಪುಟ ಸಂಖ್ಯೆ ೩೬
೧೮. ಅದೇ ಪುಟ
೧೯. ಹೀಗೆ ಹಾಳೆಯ ಮೇಲೆ ಹಾಡು, ಮಮತಾ ಜಿ ಸಾಗರ, ಪುಟ ಸಂಖ್ಯೆ ೪೩
೨೦. ಕಿಂಚಿತ್ತು ಪ್ರೀತಿಯ ಬದುಕು ಪುಟ ಸಂಖ್ಯೆ ೨೯
೨೧. ಸಮಗ್ರ ಕಾವ್ಯ ರಾಮಚಂದ್ರಶರ್ಮ ಪುಟ ಸಂಖ್ಯೆ ೮೯
೨೨. ಅದೇ ಪುಟ

## ಅಧ್ಯಾಯ-ಆರು

## ಮಳೆ ಬಂದ ಪರಿಣಾಮ : ಸಂಬಂಧಗಳ ಮೇಲೆ

### ಪೀಠಿಕೆ

ಮಗುವಿನ ಜನನದೊಂದಿಗೆ ಸಂಬಂಧಗಳು ಹುಟ್ಟಿಕೊಳ್ಳುತ್ತವೆ. ತಾಯಿ-ಮಗು ಅಣ್ಣ-ತಂಗಿ, ಅಕ್ಕ-ತಮ್ಮ, ಗೆಳೆಯ-ಗೆಳತಿ, ಗಂಡ-ಹೆಂಡತಿ, ಚಿಕ್ಕಮ್ಮ-ಚಿಕ್ಕಪ್ಪ, ದೊಡ್ಡಮ್ಮ-ದೊಡ್ಡಪ್ಪ ಹೀಗೆ ಸಂಬಂಧಗಳು ಬೆಸೆಯುತ್ತಾ ಸಾಗುತ್ತವೆ. ಅಲ್ಲದೆ ಸಂಬಂಧಗಳು ವೃತ್ತಿಯನ್ನು ಅನುಸರಿಸಿಯೂ ಮುಂದುವರಿಯುತ್ತವೆ. ಅದು ಗುರು-ಶಿಷ್ಯರ ಸಂಬಂಧ, ರಾಜಕೀಯ ಸಂಬಂಧ, ಅಧಿಕಾರಿ ಮತ್ತು ಅಧೀನ ನೌಕರ ಸಂಬಂಧ, ಪ್ರಾಣಿ ಮತ್ತು ಮನುಷ್ಯನ ಸಂಬಂಧ, ದೇವರು ಮತ್ತು ಭಕ್ತರ ಸಂಬಂಧ, ಪೂಜಾರಿ ಮತ್ತು ಭಕ್ತರ ಸಂಬಂಧ- ಹೀಗೆ ಸಂಬಂಧ ಎಂಬುದು ಭಿನ್ನ ಆಯಾಮಗಳನ್ನು ಪಡೆದುಕೊಂಡಿದೆ.

ಆಧುನೀಕರಣ, ನಗರೀಕರಣದ ಈ ಹೊತ್ತಿನಲ್ಲಿ ಸಂಬಂಧಗಳು ತಮ್ಮ ಮೌಲ್ಯವನ್ನು ಕಳೆದುಕೊಳ್ಳುತ್ತಿವೆ. ಸಂಬಂಧಗಳು ನಶಿಸಿ ಹೋಗುತ್ತಿವೆ. ಮನುಷ್ಯರನ್ನು ಬೆಸೆಯುವ ಸಂಬಂಧದ ಕೊಂಡಿಗಳು ಕಳಚಿ ಮನುಷ್ಯನನ್ನು ಒಂಟಿತನ, ಏಕಾಕಿತನಗಳು ಕಾಡುತ್ತಿವೆ. ಕಾರಣ ಬದಲಾದ ಸಾಮಾಜಿಕ ವ್ಯವಸ್ಥೆ, ಆಧುನಿಕ ಜೀವನ ಪದ್ಧತಿ, ಸ್ವಾರ್ಥ, ದುರಾಸೆಗಳು ಸಂಬಂಧಗಳು ಸ್ವರೂಪವನ್ನು ಬದಲಾಯಿಸುತ್ತಿವೆ. ಇಂದು ಮಾನವೀಯ ಸಂಬಂಧಗಳು ಕಳಚಿಹೋಗಿವೆ. ಒಬ್ಬ ಮನುಷ್ಯನನ್ನು ಮಾತನಾಡಿಸುವಾಗಲೂ ಇವನಿಂದ ನನಗಾಗುವ ಫಲವೇನು ಎಂಬ ನಿರೀಕ್ಷೆಯಿಂದ ಮಾತನಾಡಿಸುವ ಪರಿಸ್ಥಿತಿ ತಲೆದೋರಿದೆ.

ಕುಟುಂಬವು ಮನುಷ್ಯನ ಸಾಮಾಜಿಕ ಅಗತ್ಯತೆಗಳನ್ನು ಪೂರೈಸುತ್ತಿತ್ತು. ಆದರೆ ಇಂದು ಕುಟುಂಬಗಳು ವಿಘಟನೆಗೊಂಡು ಚಿಕ್ಕಚಿಕ್ಕ ಘಟಕಗಳಾಗಿ ಮಾರ್ಪಾಡಾಗುತ್ತಿವೆ. ಈ ಚಿಕ್ಕ ಘಟಕಗಳು ಮನುಷ್ಯನ ಸಂಬಂಧಗಳನ್ನು ತುಂಬಾ ಸಂಕೀರ್ಣಗೊಳಿಸುತ್ತಿವೆ. ಈ ಸಂಕೀರ್ಣ ಸ್ಥಿತಿ ಬದಲಾಗದ ಮಟ್ಟಕ್ಕೆ ಇಂದು ತಲುಪಿದೆ. ಇದಕ್ಕೆ ಮೂಲ ಕಾರಣವಾಗಿ ದುರಾಸೆ, ಹೊಟ್ಟೆಕಿಚ್ಚು, ಅನೈತಿಕ ಸಂಬಂಧ, ಮಲಿನ ಮನಸ್ಸುಗಳು ಕಲ್ಲು ಹೃದಯಗಳೇ ಮುಖ್ಯ ಕಾರಣವಾಗಿ ಕಾಣುತ್ತವೆ. ಈ ರೀತಿಯಲ್ಲಿ ಕುಟುಂಬವು ನಿರ್ವಹಿಸಬೇಕಾದ ಕೆಲಸಗಳಿಂದ ಕುಟುಂಬಗಳು ಹಿಂದೆ ಸರಿಯುತ್ತಿವೆ. ಹಾಗಾಗಿ ಸಂಬಂಧಗಳ ಸ್ವರೂಪವೇ ಬದಲಾಗಿದೆ. ಸಂಬಂಧಗಳನ್ನು ಬಳಸುವ ಮತ್ತು ಬೆಸೆಯುವ ಅವಶ್ಯಕತೆ ಅಗತ್ಯತೆ ಇದೆ. ಸಂಬಂಧಗಳು ಇಂದು ಅವನತಿಯ ಹಾದಿಯನ್ನು ಹಿಡಿದಿರುವುದನ್ನು ನಮ್ಮ ಸಾಮಾಜಿಕ ಜಾಲತಾಣಗಳು ವೃತ್ತಪತ್ರಿಕೆ ದಿನ ಪತ್ರಿಕೆಗಳ ವರದಿಯನ್ನು ನೋಡಿದರೆ ತಿಳಿಯುತ್ತದೆ. ಸಂಬಂಧಗಳ ಸ್ವರೂಪದ ಬದಲಾವಣೆಯ ಪರ್ವ ಕಾಲದಲ್ಲಿ ಇಂದು ನಾವಿದ್ದೇವೆ. ಸಂಬಂಧಗಳನ್ನು ಹೊಸದಾಗಿ ಕಟ್ಟುವ ಮತ್ತು ಬೆಸೆಯುವ ಕೆಲಸ ಜರೂರಿದೆ. ಸಂಬಂಧಗಳ ಒಟ್ಟು ಸ್ವರೂಪದಲ್ಲಿ ಬದಲಾವಣೆಗಳಾಗಿದ್ದರೂ ಸಂಬಂಧಗಳು ಉಳಿದು ಬಂದಿರುವುದು ಸಂಬಂಧಗಳ ಶಕ್ತಿ ಮತ್ತು ಗಟ್ಟಿತನವನ್ನು ತೋರಿಸುತ್ತದೆ.[೧]

ಮಳೆ ಮತ್ತು ಮನುಷ್ಯರ ಸಂಬಂಧ ಅತ್ಯಂತ ಪರಿಣಾಮಕಾರಿಯಾದದ್ದು. ಅದು ವಿಭಿನ್ನ ಆಯಾಮಗಳನ್ನು ಹೊಂದಿದೆ ಎಂಬುದನ್ನು ಹಿಂದಿನ ಅಧ್ಯಾಯದಲ್ಲಿ ನೋಡಿದೆವು. ಮಳೆಯನ್ನು ಹಳ್ಳಿಯಲ್ಲಿ ಆಪ್ಯಾಯಮಾನದಿಂದ ಸ್ವಾಗತಿಸಿದರೆ ಮಹಾ ನಗರಗಳಲ್ಲಿ ಅಯ್ಯೋ ಏನಿದು ಶನಿ ಎಂದು ದೂರುವ ಯವಕ ಯುವತಿಯರು, ತಮ್ಮ ದಿನ ನಿತ್ಯದ ವ್ಯವಹಾರಗಳಿಗೆ ತೊಂದರೆಯಾಯಿತಲ್ಲ ಎಂದು ಶಪಿಸುವ ವ್ಯಾಪಾರಿಗಳು, ನಾಗರೀಕರು, ತಾವು ತಿನ್ನುವ ಕಾಳುಕಡ್ಡಿ, ಹೂ, ಹುಣ್ಣು, ತರಕಾರಿ, ಮೀನು, ಮಾಂಸ, ಎಲ್ಲವೂ ಈ ಮಳೆಯಿಂದ ಮತ್ತು ಕೃಷಿ ಪೋಷಕ ಪಶು ಪಾಲಕರಿಂದಲೇ ಬರುತ್ತಿದೆ ಎಂಬುದನ್ನು ಮರೆತಿದ್ದಾರೇನೋ.

ಮನುಷ್ಯ ಸಂಬಂಧಗಳನ್ನು ಬೆಸೆಯುವ ಕೆಲಸ ಮಳೆಯಿಂದ ಸಾಧ್ಯವಾಗಿದೆ ಎಂದು ಕೆ. ಎಸ್. ನಿಸ್ಸಾರ್ ಅಹಮದ್ ಅವರು ಅಭಿಪ್ರಾಯ ಪಟ್ಟಿದ್ದಾರೆ. ಮಳೆಯು ಸಂಬಂಧಗಳ ಮೇಲೆ ಗಾಢವಾದ ಪರಿಣಾಮವನ್ನು ಬೀರುತ್ತದೆ. ಮಳೆಯು ಭೂಮಿಯ ಎಲ್ಲಾ ಜೀವರಾಶಿಗಳಿಗೂ ಚೈತನ್ಯವನ್ನು ತುಂಬಿ ಮರು ಹುಟ್ಟು ಪಡೆಯಲು ಅವಕಾಶವನ್ನು ಕಲ್ಪಿಸುತ್ತದೆ. ಹೊಸ ಹೊಸ ಸಂಬಂಧಗಳನ್ನು ಬೆಸೆಯುವಂತೆ ಮಾಡಿದೆ.

ಆಧುನಿಕ ಕನ್ನಡ ಕವಿಗಳು ಮಳೆಯು ಸಂಬಂಧಗಳ ಮೇಲೆ ಬೀರಿದ ಪರಿಣಾಮಗಳೇನೆಂಬುದನ್ನು ಚಿತ್ರಿಸುವ ಪ್ರಯತ್ನ ಮಾಡಿದ್ದಾರೆ. ಸಂಬಂಧಗಳ ಸ್ವರೂಪವೇನೆಂಬುದನ್ನು ಮಳೆಯು ಮನುಷ್ಯನಿಗೆ ತೋರಿಸಿಕೊಟ್ಟಿದೆ ಎಂಬುದನ್ನು ಗುರುತಿಸಿದ್ದಾರೆ. ಮಳೆ ಎರಡು ಜೀವಿಗಳ ನಡುವೆ ಹೊಸ ಸಂಬಂಧವನ್ನು ಬೆಸೆಯುವಲ್ಲಿ ಸಹಾಯಕ. ಮಳೆ ಪ್ರಕೃತಿಯ ಮತ್ತು ಮನುಷ್ಯನ ಸಂಬಂಧವನ್ನು ಉಳಿಸಿ ಬೆಳೆಸಲು ಸಹಾಯಕವಾಗುತ್ತದೆ. ಹೀಗೆ ಮಳೆಯು ಮನುಷ್ಯನ ಸಂಬಂಧಗಳ ಮೇಲೆ ಗಾಡ ಪರಿಣಾಮ ಬೀರಿದೆ ಎಂಬುದನ್ನು ಕವನಗಳ ವಿಶ್ಲೇಷಣೆಯಲ್ಲಿ ವಿಸ್ತರಿಸಬಹುದು.

ಜಿ.ಎಸ್. ಶಿವರುದ್ರಪ್ಪನವರು ಮಳೆಯು ಸಂಬಂಧಗಳ ಮೇಲೆ ಬೀರುವಂತ ಪರಿಣಾಮಗಳನ್ನು ಕುರಿತು ತಮ್ಮ 'ಮಳೆ' ಕವನದಲ್ಲಿ ಈ ರೀತಿ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಪ್ರಕೃತಿ ಮತ್ತು ಮನುಷ್ಯನ ನಡುವೆ ಅನ್ಯೋನ್ಯ ಬಾಂಧವ್ಯವನ್ನು ಬೆಸೆದಿದೆ ಎಂದು ಹೇಳಿದ್ದಾರೆ.

"ಮುಂಗಾರಿನ ಅಭಿಷೇಕಕೆ
ಮಿದುವಾಯಿತು ನೆಲವು
ದಗೆ ಆರಿದ ಹೃದಯದಲ್ಲಿ
ಪುಟಿದೆದ್ದಿತು ಚೆಲುವು"[1]

ಮುಂಗಾರಿನ ಮಳೆಯು ಭೂಮಿಗೆ ಸುರಿದಿದ್ದರಿಂದ ಭೂಮಿಯು ಮಿದುವಾಯಿತು. ಧಗೆ ಆರಿದ ಹೃದಯದಲ್ಲಿ ಪುಟಿದೆದ್ದಿತು ಚೆಲುವು. ಎಂದರೆ ಭೂಮಿಗೆ ಸೌಂದರ್ಯವು ಬರುವುದು ಮಳೆ ಬಂದಿದ್ದರಿಂದ. ಹಾಗಾಗಿ ಮಳೆಯು ಭೂಮಿ ಮತ್ತು ಸಸ್ಯಗಳ ಸಂಬಂಧಕ್ಕೆ ನೆರವಾಗಿದೆ.

"ಬಾಯಾರಿದ ಬಯಕೆಗಳಲಿ
ಥಳ ಥಳಿಸುವ ನೀರು
ಕಣ್ಣಿಗೆ ತಣ್ಣನೆ ಮುತ್ತಿಡುತಿದೆ
ಪ್ರೀತಿಯಂತ ಹಸಿರು
ಮೈ ಮನಗಳ ಕೊಂಬೆಯಲಿ
ಹೊಮ್ಮುವ ಧನಿಯಿಂಪು
ನಾಳೆಗೆ ನನಸಾಗುವ ಕನಸಿನ
ಹೂ ವರಳುವ ಕಂಪು"[2]

ಮನುಷ್ಯನ ಬಾಯಾರಿಕೆಯಂತೆಯೇ ಬಯಕೆಗಳು ಆಸೆಗಳು ಕಾಯುತ್ತಿವೆ ನೀರಿಗಾಗಿ. ಮಳೆ ಬಂದರೆ ಕಣ್ಣಿಗೆ ತಣ್ಣನೆ ಮುತ್ತು ನೀಡಿದಂತೆ ಸಂತೋಷವಾಗುತ್ತದೆ. ಪ್ರೀತಿಯಂತ ಹಸಿರು ಅಂದರೆ ಮಳೆ ಪ್ರೀತಿ ಮತ್ತು ಬಯಕೆಗಳೆರಡರ ಮೇಲೂ ಪ್ರಭಾವ ಬೀರುತ್ತದೆ. ಮಳೆಯು ಪ್ರೀತಿಯ ಸಂಬಂಧಗಳನ್ನು ಉಳಿಸುವ ಬೆಳೆಸುವ ಮಧ್ಯವರ್ತಿಯಾಗಿದೆ. ಮಳೆ ಮೈ ಮತ್ತು ಮನಸ್ಸುಗಳ ಕೊಂಬೆಯಲ್ಲಿ ಹೊರಡುವಂತಹ ಧ್ವನಿ ಇಂಪು. ಅಂದರೆ ಮನಸ್ಸಿನ ಆಸೆಗಳ ಸಾಕಾರಕ್ಕೆ ಮೈ ಕಾರಣವಾಗುತ್ತದೆ. ಅಂತೆಯೇ ಆಸೆಗಳು ಹುಟ್ಟಲು ಮಳೆ ಕಾರಣವಾಗುತ್ತದೆ. ನಾಳೆಗೆ ನನಸಾಗುವ ಕನಸಿನ ಹೂವರಳುವ ಕಂಪು ಎಂದು ಹೊಸ ಆಸೆಗಳನ್ನು ಬಿತ್ತಿ

ಅವನ್ನು ನನಸಾಗಿಸುವತ್ತ ಮಳೆ ಕಾರ್ಯೋನ್ಮುಖವಾಗುತ್ತಿದೆ. ಒಟ್ಟಾರೆ ಮಳೆಯು ಮನುಷ್ಯನ ಆಸೆಗಳ ಮೂಲ ಅವನ ಸಂಬಂಧಗಳ ಬೆಸೆಯುವಂತೆ ಮಾಡಿದೆ.

ಮುಂದುವರಿದು...

"ಭರವಸೆಗಳ ಹೊಲಗಳಲ್ಲಿ
ನೇಗಿಲ ಗೆರೆ ಕವನ
ಶ್ರಾವಣದಲಿ ತೆನೆದೂಗುವ
ಜೀವೋತ್ಸವ ಗಾನ"[3]

ಮಳೆಯು ಕೃಷಿ ಮತ್ತು ಮನುಷ್ಯನ ನಡುವಿನ ಸಂಬಂಧದ ಕೊಂಡಿಯಾಗಿದೆ. ಭರವಸೆಗಳನ್ನು ಹೊತ್ತು ಹೊಲಗಳಲ್ಲಿ ನೇಗಿಲು ಹಿಡಿದು ರೈತ ಗೆರೆಯನ್ನು ಹಾಕುತ್ತಾನೆ, ಭೂಮಿಯನ್ನು ಉಳುತ್ತಾನೆ. ಆ ಮೂಲಕ ತನ್ನ ಮತ್ತು ಭೂಮಿಯ ಕೃಷಿಯ ಸಂಬಂಧವನ್ನು ಗಟ್ಟಿಗೊಳಿಸಿಕೊಳ್ಳುತ್ತಾನೆ. ಶ್ರಾವಣದಲಿ ತೆನೆದುಗುವ ಜೀವೋತ್ಸಾಹ ಗಾನಕ್ಕೂ ಸಹ ಮಳೆಯೇ ಕಾರಣವಾಗಿದೆ. ಮಳೆಯು ರೈತನ ಮತ್ತು ಕೃಷಿ ಸಂಬಂಧವನ್ನು ಗಟ್ಟಿಗೊಳಿಸುತ್ತದೆ. ಶ್ರಾವಣ ಮಾಸದಲ್ಲಿ ಶ್ರಮದ ಫಲವಾಗಿ ತೆನೆಯಾಗುವ ಜೀವನಕ್ಕೆ ಮತ್ತೆ ಉತ್ಸಾಹ ತುಂಬುವ ಕಾಲವಾಗಿದೆ ಎಂದಿದ್ದಾರೆ.

ಎಂ. ವಿ. ಸೀತಾರಾಮಯ್ಯನವರು ಮಳೆಯನ್ನು ಕುರಿತ 'ಮಳೆ ಮುಗಿಲಿನ ತೆರೆ' ಎಂಬ ಕವನದಲ್ಲಿ ಸಂಬಂಧಗಳ ಮೇಲೆ ಮಳೆ ಬೀರುವ ಪರಿಣಾಮವನ್ನು ವಿವರಿಸಿದ್ದಾರೆ.

"ಸರಿಯಲು ಮಳೆ ಮುಗಿಲಿನ ತೆರೆ
ನೀಲಿಯ ನಭ ತಿಂಗಳ ತೊರೆ
ಉಕ್ಕುತ ಇಳೆಗಿಳಿಯೆ
ಒಡನೆಯ ತೇಲುತ ಬಂದಳು
ಎನ್ನಯ ಮನದನ್ನೆ
ಒಲವಿನ ಕಾಣಿಕೆ ತಂದಳು
ಮಾಡಿದ ಕೈಸನ್ನೆ"[4]

ಆಕಾಶವೆಲ್ಲ ನೀಲಿಯಾಗುತ್ತದೆ, ಹರಿಯುವ ನೆರೆ ತಿಂಗಳತೊರೆ ಉಕ್ಕುತ ಇಳೆಗಿಳಿಯೆ. ಎಂದರೆ ಭೂಮಿಗೆ ಮಳೆಯನ್ನು ಸ್ವಾಗತಿಸುತ್ತಾ, ಉಕ್ಕುತ್ತಾ ಭೂಮಿಗೆ ಬಾ ಎಂದು ಹೇಳುತ್ತಾರೆ. ಈ ಮಳೆಯೊಂದಿಗೆ ನನ್ನ ಮನಸ್ಸನ್ನು ಗೆದ್ದವಳು ಮನದನ್ನೆ ಒಡನೆಯೇ ತೇಲುತ್ತಾ ಬಂದಳೆಂದಿದ್ದಾರೆ. ಅಂದರೆ ಮಳೆ ಬಂದಿದ್ದೆ ಆದರೆ ಸಂಬಂಧಗಳು ಹೇಗೆ ಕಾರ್ಯೋನ್ಮುಖವಾಗುತ್ತವೆ ಎಂಬುದನ್ನು ತಿಳಿಸುವ ಪ್ರಯತ್ನ ಮಾಡಿದ್ದಾರೆ. ಬಂದಂತಹ ನನ್ನ ಗೆಳತಿ ಒಲವಿನ ಕಾಣಿಕೆಯನ್ನು ತಂದಳು ಎಂದಿದ್ದಾರೆ. ಅಂದರೆ ಸಂಬಂಧಗಳನ್ನು ಬೆಸೆಯುವಂತ ಶಕ್ತಿ ಮಳೆಗಿದೆ ಎಂದಿದ್ದಾರೆ.

ಮಳೆಯು ಹೆಣ್ಣು ಮತ್ತು ಗಂಡಿನ ಸಂಬಂಧವನ್ನು ಬೆಸೆಯಲು ಸಹಕಾರಿಯಗಿದೆ. ಮಳೆ ಬಂದದ್ದರಿಂದಲೇ ಕೃಷಿಗೆ ಚಾಲನೆ ದೊರಯುತ್ತದೆ. ಗಂಡು ಹೆಣ್ಣುಗಳ ಸಂಬಂಧವು ಹೊಸ ನಿಯಮವನ್ನು ಪಡೆಯಲು ಮಳೆ ಸಹಕಾರಿಯಾಗಿದೆ.

ಯು. ಆರ್. ಅನಂತಮೂರ್ತಿ ಅವರು ತಮ್ಮ 'ಬಾಹುಲಿ' ಕವನ ಸಂಕಲನದ ಮತ್ತೆ ಮಳೆ ಹೊಯ್ಯುತ್ತಿದೆ ಎಂಬ ಕವನದಲ್ಲಿ ಮಳೆ ಬಂದ ಪರಿಣಾಮ ಸಂಬಂಧಗಳ ಮೇಲೆ ಹೇಗಿದೆ ಎಂಬುದನ್ನು ವಿವರಿಸಿದ್ದಾರೆ.

"ಅದು ನೆನಪುಂಟೆ?

ಇಕೋನಷ್ನ ಉದ್ದನೇಯ ಹುಡುಗಿ
ಕಿವಿ ಮುಚ್ಚಿ ಆಲಿಸುವೆ ಗೊತ್ತೆವಯ್ಯಾರಿ
ಗುಟ್ಟಗಿ ಬೆವೆಸುವೆಮು ಇತ್ತಕಡೆ ಹೊರಳಿ
ಎಲ್ಲ ಬಿಚ್ಚಿದ ಮೇಲೆ ಕಿವಿ ಮುಚ್ಚಲೇಕೆ"

ಹಳೆಯ ನೆನಪುಗಳನ್ನು ಮಳೆ ಮತ್ತೆ ಮತ್ತೆ ನೆನಪಿಸುತ್ತದೆ ಎಂಬುದನ್ನು ಹೇಳುತ್ತಾ ಕವಿಯು ನೆನಪುಂಟೆ? ಎಂದು ಪ್ರಶ್ನಿಸುತ್ತಾರೆ.ಉದ್ದನೆಯ ಹುಡುಗಿ ಕಿವಿಮುಚ್ಚಿ ಆಲಿಸುವೆ ಗೊತ್ತೇವೈಯ್ಯಾರಿ ಎನ್ನುತ್ತ ಎಲ್ಲ ಬಿಚ್ಚಿದ ಮೇಲೆ ಕಿವಿಯನ್ನೇಕೆ ಮುಚ್ಚುವೆ ಎಂದಿದ್ದಾರೆ. ಮಳೆಯ ಹಿನ್ನೆಲೆಯಲ್ಲಿ ಹೆಣ್ಣು-ಗಂಡಿನ ಅನೇಕ ಸಂಬಂಧಗಳನ್ನು ವಿವರಿಸುವ ಪ್ರಯತ್ನವನ್ನು ಅನಂತಮೂರ್ತಿಯವರು ಮಾಡಿದ್ದಾರೆ.

"ಕಪ್ಪಗಿನ ಕಣ್ಣವಳೆ ಕೈತಟ್ಟಿ ನಕ್ಕವಳೆ
ಅಡಗಿ ಬಾಗಿಲ ಹಿಂದೆ ಬೆಚ್ಚಿಸಿದ ಸರಳೆ
ಮತ್ತೆ ಮಳೆ ಹೊಯ್ಯತಿದೆ ಎಲ್ಲನೆನಪಾಗುತಿದೆ
ಸುಖ-ದುಃಖ ಬಯಕೆ ಭಯ, ಒಂದೇ? ಎರಡೆ"

ಹೆಣ್ಣು ಗಂಡಿನ ಚೆಲ್ಲಾಟದ ಅನೇಕ ನೆನಪುಗಳನ್ನು ಈ ಮಳೆ ನೆನಪಿಗೆ ತರುತ್ತಿದೆ. ಹಿಂದೆ ತನ್ನ ಹುಡುಗಿ ಕಪ್ಪಗಿನ ಕಣ್ಣಿನ್ನ ಹೊಂದಿದ್ದ ಚೆಲುವೆಯಾಗಿದ್ದಳು. ನನ್ನನ್ನು ಕಂಡು ಕೈತಟ್ಟಿ ನಕ್ಕವಳು ಎಂದು ನೆನಪಿಸಿಕೊಳ್ಳುತ್ತಾರೆ. ನನ್ನ ಹುಡುಗಿ ಎಂಥವಳೆಂದರೆ ಅಡಗಿ ಬಾಗಿಲಹಿಂದೆ ಬೆಚ್ಚಿಸಿದಂತಹ ಸರಳವಾದ ಮನಸ್ಥಿತಿಯವಳೇ ಮತ್ತೆ ಮಳೆ ಹೊಯ್ಯತ್ತಿದೆ ಎಲ್ಲವನ್ನು ನೆನಪಿ ಸುತ್ತದೆ ಎಂದಿದ್ದಾರೆ. ಮಳೆ ಬಂದಂತಹ ಅಂದರೆ ಮನಸ್ಸಿನಲ್ಲಿ ಹುದುಗಿದ್ದ ನೆನಪುಗಳೆಲ್ಲ ಮಳೆಯ ರೀತಿಯಲ್ಲಿ ಬರುತ್ತಿವೆ ಎಂದಿದ್ದಾರೆ. ಎಲ್ಲ ಸಂಬಂಧಗಳನ್ನು ಮತ್ತೆ ಮತ್ತೆ ನೆನಪಿಗೆ ತರುತ್ತಿದೆ. ಅದು ಸುಖ-ದುಃಖ ಬಯಕೆ ಭಯ ಒಂದೇ? ಎರಡೇ ಎಲ್ಲವು ಸಹ ನೆನಪಾಗುತ್ತಿವೆ. ಮಳೆಯು ಎಲ್ಲ ಸಂಬಂಧಗಳನ್ನು ನೆನಪಿಸುಸುವ ಮತ್ತು ಬೆಸೆಯುವ ಕೆಲಸಮಾಡಿದೆ. ಮುಂದುವರೆದು...

"ಅರ್ಧಪಶು ಆಪಕ್ಷಿ ಇನ್ನರ್ದ ಬಾವಲಿಯಂತೆ
ವ್ಯರ್ಥ ರೆಕ್ಕೆಯ ಬಡಿದು ಟೇಂಕದಲಿ ಕುಸಿಯೆ
ತೊಡೆ ಮೀಟಿ ಕೆಣಕಿದ್ದೆ ಮತ್ತೆ ಸಂತೈಸಿದ್ದೆ
ಒಲಿದು ಒಲ್ಲದ ಗಂಡಿನವಮಾನ ತೊಳೆದೆ.
ಮತ್ತೆ ಮಳೆ ಹೊಯ್ಯತಿದೆ...
ಎಲ್ಲ ನೆನಪಾಗುತಿದೆ?
ಸುಖ-ದುಃಖ, ಭಯಕೆ ಭಯ, ಒಂದೆ ಎರಡೆ"

ಗಂಡು ಹೇಣ್ಣಿನ ಲೈಂಗಿಕ ಸಂಬಂಧವನ್ನು ಮಳೆ ಪ್ರಭಾವಿಸಿದೆ ಅಂತಹ ನೆನಪುಗಳನ್ನು ಮಳೆ ತರುತ್ತಿದೆ ಎಂಬುದನ್ನು ಅನಂತಮೂರ್ತಿ ಅವರು ಕಟ್ಟಿಕೊಟ್ಟಿದ್ದಾರೆ. ಅರ್ದಪಶು ಆ ಪಕ್ಷಿ ಇನ್ನರ್ದ ಬಾವಲಿಯಂತೆ ನಮ್ಮ ಜೀವನದಲ್ಲಿ ಲೈಂಗಿಕ ಕ್ರಿಯೆಯಲ್ಲಿ ವ್ಯರ್ಥ. ರೆಕ್ಕೆಯನ್ನು ಬಡಿದು ಟೇಂಕದಲ್ಲಿ ಕಸಿದವನನ್ನು ತೊಡೆಮೀಟಿಕೆಣಕಿದ್ದೆ ಮತ್ತೆ ಸಂತೈಸಿದ್ದೆ. ಒಲ್ಲದ ಗಂಡನ ಅವಮಾನವನ್ನು ತೊಳೆದೆ ಎನ್ನುತ್ತಾರೆ. ಮಳೆ ಲೈಂಗಿಕ ಕ್ರಿಯೆಗೆ ಪ್ರೇರಕ ಶಕ್ತಿಯಾಗಿದ್ದನ್ನು ಒಂದು ಅನುಭವವಾಗಿ ನೆನೆಸುತ್ತ ಹೆಣ್ಣು ಮತ್ತು ಗಂಡಿನ ಸಂಬಂಧವನ್ನು ವಿಭಾಗಿಸಿಕೊಂಡಿದ್ದಾರೆ. ಗಂಡಿನ ಅವಮಾನವನ್ನು ತೊಳೆದವಳು ನೀನು ಎಂದಿದ್ದಾರೆ. ಮತ್ತೆ ಮಳೆ ಹೊಯ್ಯತ್ತಿದೆ. ಆ ಮೂಲಕ ಮತ್ತೆ ಮಳೆ ಎಲ್ಲವನ್ನು ನೆನೆಸುತ್ತಿದೆ. ಸುಖ-ದುಃಖ ಭಯಕ್ಕೆ ಭಯ ಎಲ್ಲಾ ಭಾವನೆಗಳನ್ನು ನೆನಪಿಸುತ್ತ ಸಂಬಂಧಗಳಲ್ಲಿ ಹೊಸ ಹುಟ್ಟನ್ನು ನೀಡುತ್ತಿದೆ ಎಂದಿದ್ದಾರೆ.

ಅನಂತಮೂರ್ತಿಯವರು ಮಳೆಯು ಹಳೆಯ ನೆನಪುಗಳನ್ನು ಸುಖ ದುಃಖಗಳನ್ನು ನೆನಪಿಸುತ್ತ ಸಂಬಂಧಗಳನ್ನು ಮರು ಸೃಷ್ಟಿಸುವ ಪ್ರಯತ್ನ ಮಾಡುತ್ತಿದೆ ಎಂದಿದ್ದಾರೆ. ಒಟ್ಟಾರೆ ಮಳೆಯು ಸಂಬಂಧಗಳ ಮೇಲೆ ಗಾಢ ಪರಿಣಾಮವನ್ನು ಬೀರುತ್ತದೆ.

ಮಾಲತಿ ಪಟ್ಟಣ ಶೆಟ್ಟಿಯವರು 'ದಾಹತೀರ' ಕವನ ಸಂಕಲನದ 'ಮಳೆ ಸುರಿಯುತಿದೆ' ಎಂಬ ಕವನದಲ್ಲಿ ಮಳೆ ಬಂದ ಪರಿಣಾಮ ಸಂಬಂಧಗಳ ಮೇಲೆ ಹೇಗಾಗಿದೆ ಎಂಬುದನ್ನು ವಿವರಿಸುವ ಪ್ರಯತ್ನ ಮಾಡಿದ್ದಾರೆ.

"ಆಷಾಡದ ಮೋಡದದೆಯಲಿ ನುಗ್ಗುತ್ತಿದೆ ಹುಚ್ಚುಗಾಳಿ ಮಳೆ
ಮನದ ಗೂಡು ಗೂಡಲ್ಲಿ ಹಕ್ಕಿ ಕೂಗಿ ಕರೆಯುತಿದೆ"

ಆಷಾಡದ ಮೋಡದ ಎದೆಯಲ್ಲಿ ನುಗ್ಗುತ್ತಿದೆ ಎಂದರೆ ಮನಸ್ಸಿನ ಆಳದಲ್ಲಿ ಅನೇಕ ಭಾವಗಳು ಮೂಡುತ್ತಿವೆ. ಮನಸ್ಸಿನಲ್ಲಿ ಹಕ್ಕಿಯು ಕೂಗಿ ಕರೆಯುತ್ತಿದೆ ಎಂದಿದ್ದಾರೆ. ಮುಂದುವರೆದು ಹೆಣೆಯುತ್ತಿದೆ ಮಳೆ ಮುತ್ತಿನ ಪರದೆ ಬಾನಿನಿಂದ ಬುವಿವರೆಗೆ...

"ಅಡಿಯಿಂದ ಮುಡಿಗೆ ಮುತ್ತು ಹೇರುವ ನಲ್ಲನ ನೆನಪು ಸುರಿಯುತ್ತಿದೆ.
ಮಳೆಯ ಸ್ಪರ್ಷಕ್ಕೆ ಇಳಿಯ ಮೈಯೆಲ್ಲ ಹೂ ಹೂ ಹಸಿರು
ಮೊಗ್ಗಾಗಿದೆ ಮನ ತಿಳಿಯದೇನೋ ಜಾಣ ನೋವು ಸುರಿಯುತ್ತಿದೆ"[೮]

ಮಳೆಯು ಹೆಣೆಯುತ್ತಿದೆ ಮುತ್ತಿನ ಪರದೆಯಿಂದ ಬಾನಿನಿಂದ ಭುವಿಯವರೆಗೆ. ಅಂದರೆ ಮಳೆ ಬರುವ ಸಂದರ್ಭವು ಆಕಾಶದಿಂದ ಭೂಮಿಯವರೆಗೂ ಮಳೆ ಮುತ್ತನಿಡುವಂತೆ ತೋರಿದೆ. ಮಳೆಯನ್ನು ಕಂಡು ಕವಿಯತ್ರಿಗೆ ತನ್ನ ನಲ್ಲ ತನನ್ನು ಮುದ್ದಿಸುವಂತೆ ಮಳೆ ಅಡಿಯಿಂದ ಮುಡಿಯವರೆಗೂ ಮುತ್ತಿನ ಮಳೆಗರೆಯುತ್ತಿದೆ. ಅವನ ನೆನಪನ್ನು ಮಳೆ ತರುತ್ತಿದೆ ಎಂದಿದ್ದಾರೆ. ಮಳೆ ಬಂದರೆ ಅದರ ಸ್ಪರ್ಷದಿಂದಲೆ ಭೂಮಿಯ ತುಂಬೆಲ್ಲವು ಅಥವ ಭೂಮಿಯೇ ಹೂ ಹಸಿರು ಅಂತೆಯೇ ಮಳೆಯಿಂದ ಭೂಮಿ ಹೂವು ಹಸಿರನ್ನು ಪಡೆಯುತ್ತಿದೆ. ಅಂತೆಯೇ ತನ್ನ ನಲ್ಲ ನಿಗಾಗಿ ಕಾದ ಕವಿಯತ್ರಿಯ ಮನಸ್ಸು ಮೊಗ್ಗಾಗಿದೆ. ಅದು ನಿನಗೆ ತಿಳಿಯುತ್ತಿಲ್ಲವೇನೋ. ನಿನಗೆ ಎನ್ನುತ್ತಾ ನೋವು ಸುರಿಯುತ್ತಿದೆ ನಿನ್ನ ಬಯಕೆಯನ್ನು ಬೇಡುತ್ತಿದೆ ಮನಸ್ಸು ಹೀಗೆ ಮಳೆಯನ್ನು ತನ್ನ ಅನುಭವಗಳೊಂದಿಗೆ ಸಮೀಕರಿಸಿ ನೋಡುವ ಪ್ರಯತ್ನ ಇಲ್ಲಿದೆ.

ಮುಂದುವರೆದು...

"ಗೂಡು ಸೇರಿವೆ ಹಕ್ಕಿ ಮೋಡದ ಮರೆಗೆ ಸಾಗಿವೆ ಚುಕ್ಕಿ
ಬಂದು ಶಯ್ಯೆ ಉರಿವ ಪಣತಿ ವಿರಹ ಸುರಿಯುತ್ತಿದೆ
ಬೆಳಗಿಂದ ಸುರಿವ ಪ್ರೀತಿ ಧೋ ಧೋದಾರೆ
ಸಂಜೆಯಾಯ್ತು ನಲ್ಲ ನೆಲ್ಲಿ? ವ್ಯರ್ಥ ಮಳೆಯು ಸುರಿಯುತ್ತಿದೆ"[೯]

ಗೂಡು ಸೇರಿವೆ ಹಕ್ಕಿ ಪಕ್ಷಿಗಳೆಲ್ಲ. ಚುಕ್ಕಿಗಳು ಮೊಡದ ಮರೆಗೆ ಸರಿದಿವೆ. ಕಾಲಿಯಾದ ಹಾಗೆ ಹುರಿಯುತ್ತಿರುವ ದೀಪ ಎರಡು ವಿರಹವನ್ನು ಸುರಿಸುತ್ತಿವೆ. ಬೆಳಗಿಂದ ಸುರಿವ ಪ್ರೀತಿ ಧೋ ಧೋ ಧಾರೆ ಎಂದರೆ ಗಂಡಿನ ಬರುವಿಕೆಗಾಗಿ ಕಾದ ಹೆಣ್ಣೊಬ್ಬಳ ಮನಸ್ಥಿತಿಯು ಇಲ್ಲಿ ವ್ಯಕ್ತವಾಗಿದೆ. ಸಂಜೆಯಾಯ್ತು ನಲ್ಲನು ಬರಲಿಲ್ಲ? ವ್ಯರ್ಥ ಮಳೆ ಸುರುಯುತ್ತಿದೆ. ಅಂದರೆ ಮಳೆಯನ್ನು ಗಂಡು ಹೆಣ್ಣಿನ ಮಿಲನದ ಸಂಕೇತವಾಗಿ ಬಳಸಿದ್ದಾರೆ. ಮಳೆಯು ಗಂಡು ಹೆಣ್ಣಿನ ಮಿಲನಕ್ಕೆ ಸ್ಪೂರ್ತಿಯನ್ನು ನೀಡುತ್ತಾರೆ. ಮಳೆಯನ್ನು ಭಾವನೆಗಳಿಗೆ ಮನುಷ್ಯ ಸಂಬಂಧಗಳಿಗೆ ಹೋಲಿಸಿದ್ದಾರೆ.

ಹೀಗೆ ಮಳೆಯು ಗಂಡು ಹೆಣ್ಣಿನ ಸಂಬಂಧದ ಮೇಲೆ ಯಾವ ರೀತಿಯ ಪರಿಣಾಮ ಬೀರುತ್ತದೆ ಎಂಬುದನ್ನು ಮಳೆಯು ಭಾವನೆಗಳ ಮೇಲೆ ಪ್ರಭಾವ ಬೀರಿ ಸಂಬಂಧಗಳನ್ನು ಬೆಸೆಯುವ ಕೆಲಸವನ್ನು ಮಾಡುತ್ತದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಮಮತಾ ಜಿ. ಸಾಗರ ಅವರು 'ಹೀಗೆ ಹಾಳೆಯಮೇಲೆ ಹಾಡು' ಕವನ ಸಂಕಲನದಲ್ಲಿನ 'ಮತ್ತೆ ಮಳೆ' ಎಂಬ ಕವನದಲ್ಲಿ ಮಳೆ ಬಂದ ಪರಿಣಾಮ ಸಂಬಂಧಗಳ ಮೇಲಾಗುವುದನ್ನು ಕುರಿತು ವಿವರಿಸಿದ್ದಾರೆ. ನಾನು ಅವನು ಮಳೆಯಲ್ಲಿ ನಿಂತಿದ್ದೇವೆ ಎಂದು ಆರಂಭಿಸುತ್ತಾರೆ.



"ನಾನು ಅವನು
ಮಳೆಯಲ್ಲ ನಿಂತಿದ್ದೇವೆ
ಮೈಗೆ ಮೈ ಬೆಸೆಯುವ ಅಂತರದಲ್ಲಿ ನೆನೆಯುತ್ತಾ
ಅವನ ದೇಶದ ಕಾಡುಗಳನ್ನು
ಆಳೆತ್ತರದ ಮರಗಳು ಅಲ್ಲಿ
ಟೊಂಗೆಗಳಲ್ಲಿ ಗೂಡು ಕಟ್ಟದೆ ಪ್ರೀತಿ
ಮೆಲ್ಲಗೆ ನುಡಿಯುತ್ತಾನಿ
ಅಲ್ಲೂ ಹೀಗೆ ಮಳೆ"[೧೦]

ಮಳೆಯಲ್ಲಿ ನೆನೆದ ಒಂದು ಅನುಭವವನ್ನು ಹೇಳುತ್ತ ಕವಯತ್ರಿ ಮಳೆ ಹೇಗೆ ಗಂಡು ಹೆಣ್ಣಿನ ಸಂಬಂಧವನ್ನು ಬೆಸೆಯುತ್ತದೆ ಎಂಬುದನ್ನು ತಿಳಿಸಿದ್ದಾರೆ. ಮಳೆ ಬರುವಾಗ ಇಬ್ಬರು ಜೊತೆಯಲ್ಲಿ ನಿಂತಿದ್ದೇವೆ ಮೈಗೆ ಮೈ ಕೂಡುವ ಗರ್ವಪಡುವ ಅಂತರದಲ್ಲಿ ಅವನು ನೆನೆಯುತ್ತ ಹೇಳುತ್ತಾನೆ. ನನ್ನ ದೇಶದಲ್ಲಿ ಆಳೆತ್ತರದ ಮರಗಳು ಅಲ್ಲಿಯು ಇಂತಹದೇ ಪ್ರೀತಿ ಗೂಡುಕಟ್ಟದೆ ಎನ್ನುತ್ತ ಮೆಲ್ಲಗೆ ನುಡಿಯುತ್ತಾನೆ. ಅಲ್ಲಿಯು ಹೀಗೆ ಮಳೆ ಅಂದರೆ ಮಳೆ ಎಲ್ಲ ಕಡೆಯು ಪ್ರೀತಿ ಪ್ರೇಮಗಳಿಗಳಿಗೆ ಸಾಕ್ಷಿಯಾಗುತ್ತದೆ. ಪ್ರೀತಿಯನ್ನು ಬೆಸೆಯುತ್ತದೆ. ಗಂಡು ಹೆಣ್ಣಿನ ಸಂಬಂಧವನ್ನು ಗಟ್ಟಿಗೊಳಿಸುತ್ತದೆ. ಮುಂದುವರೆದು ಅವನ ಗುಂಗರು ಕೂದಲನ್ನ ಹಣೆಗೆ ತಾಕಿಸುತ್ತಾ ಹೇಳುತ್ತಾನೆ. ಮಳೆ ಇಲ್ಲಿಯು ಹಾಗೆ ಎಂದು ಅವರಿಬ್ಬರ ಪ್ರೇಮಕ್ಕೆ ಕಾರಣವಾಗಿ ಮಳೆಯು ಮನಸ್ಸುಗಳನ್ನು ಪ್ರೇರೇಪಿಸುತ್ತದೆ. ಇದು ಮಿಂಚು ಕಣ್ಣುಗಳಲ್ಲಿ ಜಿನುಗುತ್ತದೆ. ಲೋಹವನ್ನು ಸುರಿಸುತ್ತದೆ ಮಳೆ ಎಂದಿದ್ದಾರೆ.

"ನನ್ನ ಬಿಸಿಯುಸಿರು
ಅವನ ಮೈಮೋಲಾಡಿ
ಅವನ ನಗು ನನ್ನ ತುಟಿಯ ಮೇಲೆ
ಕಾಯುತ್ತಿದೆ ಮಳೆ
ಹೊರಗೆ
ನಾವು ಒಳಗೆ
ನೆನೆಯುತ್ತೇವೆ"[೧೧]

ಮಳೆ ಎಂದರೆ ಮಿಲನದ ಪ್ರತಿರೂಪವೆಂಬಂತೆ ವಿವರಿಸಿದ್ದಾರೆ. ನನ್ನ ಬಿಸಿಯುಸಿರು ಅವನ ಮೈ ಮೇಲಾಡಿ ಅವನ ನಗು ನನ್ನ ತುಟಿಯ ಮೇಲಾಡುತ್ತಿದೆ ಕಾಯುತ್ತಿದೆ. ಮಳೆ ಅಂದರೆ ಮಳೆಯ ಪ್ರತಿರೂಪವೇ ಈ ಬಂಧ ಸಂಬಂಧವೆಂದು ನಾವು ನೆನೆಯುತ್ತೇವೆ. ಭಾವನೆಗಳ ಮರು ಹುಟ್ಟು ಪಡೆದಿವೆ ಎಂದರ್ಥ

"ಮಳೆಯಾಗಿ ಅವನು ನನ್ನೊಳಗೆ
ನಾನು ಮಳೆ ಅವನೊಳಗೆ
ಮಳೆ ಒಳಗೆ ಹೊರಗೆ

ಈಗ ಇಲ್ಲಿ”[೧೨]

ಮಳೆಯು ಎಲ್ಲ ಕಡೆಯು ವ್ಯಾಪಿಸಿದೆ. ಎಲ್ಲ ಮನಸ್ಸುಗಳನ್ನು ಹದಗೊಳಿಸಿದೆ ಮಳೆ ಎಂದರೆ ತನ್ನ ಪ್ರಿಯತಮನೆ ಆಗಿದೆ. ಆ ಮಳೆ ಅವನೊಳಗೆ ಮಳೆಯು ಎಲ್ಲ ಕಡೆ ಹರಡಿದೆ. ಮಳೆ ಒಳಗೆ ಹೊರಗೆ ಇಲ್ಲಿ ಅಂದರೆ ಮಳೆ ನೆನಪುಗಳಿಂದ ವಾಸ್ತವದವರೆಗೂ ಹರಡಿದೆ. ಕವನ ಬರೆಯುವಲ್ಲೂ ಮಳೆ ಪ್ರಭಾವ ಬೀರಿದೆ ಎಂದಿದ್ದಾರೆ. ಮುಂದುವರೆದು...

“ಮಳೆಯಾಗಿ ಸುರಿಯುತ್ತಿದೆ
ಅವನ ನೆನಪು
ಮರೆತ ನೆನಪು ಮರುಕಳಿಸಿದ ಹಾಗೆ
ಘಮ್ಮೆಂದು ಪ್ರೀತಿ
ಅಲ್ಲಿ ಅವನೆದೆಯಲ್ಲಿ
ಹನಿಯಾಗುತ್ತಿದೆ ನನ್ನ ನೆನಪು
ಸುರಿಯುತ್ತಿದೆ ಮಳೆ
ಅಲ್ಲಿ ಇಲ್ಲಿ”[೧೩]

ಪ್ರಿಯತಮನ ನೆನಪು ಮಳೆಯಾಗಿ ಸುರಿಯುತ್ತಿದೆ. ಅವನನ್ನು ಮರೆತ ನೆನಪು ಸಹ ಮಳೆಯ ರೂಪದಲ್ಲಿ ಮರುಕಳಿಸಿದ ಹಾಗೆ ಘಮ್ಮೆಂದು ಪ್ರೀತಿ ಮತ್ತೆ ಮತ್ತೆ ನೆನಪಾಗುತ್ತಿದೆ. ಎಂದರೆ ಇಲ್ಲಿ ಪ್ರಕೃತಿಯ ಮಳೆಯಂತೆ ಗಂಡನ ಮಳೆ ಬೇಕು ಗಂಡನ ಪ್ರೀತಿಯಮಳೆ ಬೇಕು. ದಾಂಪತ್ಯದ ಸುಖದ ಮಳೆಬೇಕು ಅಲ್ಲಿ ಅವನೆದೆಯಲ್ಲಿ ಹನಿಯಾಗುತ್ತಿದೆ ನನ್ನ ನೆನಪು ಎಂದರೆ ಮಳೆಯು ನೆನಪುಗಳ ರೀತಿಯಲ್ಲಿ ಹನಿಯಾಗಿ ಸುರಿಯುತ್ತಿದೆ ಮಳೆ ಅಲ್ಲಿ ಇಲ್ಲಿ ಎಂದರೆ ಎರಡು ಮನಸ್ಸುಗಳಲ್ಲು ಪ್ರೀತಿಯ ಸಂಬಂಧಗಳ ನೆನಪುಗಳಲ್ಲೂ ಮಳೆ ಸುರಿಯುತ್ತಿದೆ ಎಂದಿದ್ದಾರೆ.

ಒಟ್ಟಾರೆ ಮಳೆಯನ್ನು ಒಂದು ರೂಪಕದಲ್ಲಿ ಬಳಸಿ ಆ ಮಳೆಯಂತೆ ಪ್ರೇಮದ ಮಳೆ ಬೇಕು ಕಾಮದ ಮಳೆಬೇಕು.ದಾಂಪತ್ಯ ಸುಖದ ಮಳೆ ಎಂಬ ಹೊಸ ರೀತಿಯ ಮಳೆಯ ವ್ಯಾಖ್ಯಾನದೊಂದಿಗೆ ಸಂಬಂಧಗಳನ್ನು ಮಳೆ ಬೆಸೆಯುತ್ತದೆ ಎಂದಿದ್ದಾರೆ.ಮಳೆಯು ಸಂಬಂಧಗಳ ಕಳಚಿದ ಕೊಂಡಿಗಳನ್ನು ಜೋಡಿಸುತ್ತದೆ ಹಾಗೆಯೇ ಮಳೆ ಸಂಬಂಧಗಳ ಮರು ಹುಟ್ಟಿಗೆ ಸಾಕ್ಷಿಯಾಗಿನಿಲ್ಲುತ್ತದೆ ಎಂಬುದನ್ನು ಪ್ರಸ್ತುತ ಪಡಿಸಿದ್ದಾರೆ.

ಎನ್.ಎಸ್. ಲಕ್ಷ್ಮೀನಾರಾಯಣಭಟ್ಟ ಅವರು ತಮ್ಮ ‘ಜನಪ್ರಿಯ ಭಾವಗೀತೆಗಳು’ ಎಂಬ ಕವನ ಸಂಕಲನದಲ್ಲಿನ ಧೋ ಎಂದು ಸುರಿಯುತ್ತಿದೆ ಎಂಬ ಕವನದಲ್ಲಿ ಮಳೆಬಂದ ಪರಿಣಾಮ ಸಂಬಂಧಗಳ ಮೇಲಾಗಿರುವುದನ್ನು ಗುರುತಿಸಿದ್ದಾರೆ. ಅದು...

“ಧೋ ಎಂದು ಸುರಿಯುತ್ತಿದೆ ಬಾರಿ ಮಳೆ ಇಲ್ಲಿ
ಗಾಳಿ ಚಿರುತ್ತಲಿದೆ ಎಲ್ಲದಿಕ್ಕಲ್ಲಿ
ನಿನ್ನ ಬಿಟ್ಟಿರಲಾರೆ ಇಂಥ ಹೊತ್ತಲ್ಲಿ
ಹೇಗೆ ಬರಲಿ ನಿನ್ನ ಬಳಿಗೆ ಇನಿಯ
ಕೇಳ ಬೇಕಿದೆ ನೀನ್ನ ಜೇನ ದನಿಯ”[೧೪]

ಮಳೆಬಂದ ಪರಿಣಾಮದಿಂದ ಪ್ರೇಯಸಿಗೆ ಪ್ರಿಯತಮನನ್ನ ಕಾಣುವಂತಾಗಿದೆ ಎಂಬುದನ್ನು ಕುರಿತು ಹೇಳುತ್ತಾ ಮಳೆಯು ಸುರಿಯುತ್ತಿದೆ ಧೋ ಎಂದು ಸುರಿಯುತ್ತಿದೆ. ಗಾಳಿಯು ಚೀರುತ್ತಲಿದೆ. ಎಲ್ಲ ದಿಕ್ಕನಲ್ಲಿಯೂ ನಿನ್ನನ್ನ ಈ ಹೊತ್ತಿನಲ್ಲಿ ಬಿಟ್ಟರಲಾರೆ ಗೆಳೆಯ ಹೇಗೆ ಬರಲಿ ನಿನ್ನ ಬಳಿಗೆ, ಗೆಳೆಯ ಬಾ ನನ್ನ

ಕರೆದೊಯ್ಯೊ ಎಂಬಂತೆ ಕೇಳುತ್ತಿದ್ದಾಳೆ. ಅವಳು ಬರಲು ಬಯಸುತ್ತಿರುವುದು ಜೇನಿನಂತಹ ಧ್ವನಿಯನ್ನು ಕೇಳಲು.

ಮಳೆಯು ಪ್ರೇಯಸ್ಸಿಗೆ ಪ್ರಿಯತಮನ್ನು ಕಾಣುವಂತೆ ಪ್ರೇರೇಪಿಸಿದೆ. ಮಳೆಯ ಸಂದರ್ಭದಲ್ಲಿ ಬೀಸುವ ಚಳಿಗಾಳಿ ಗೆಳೆಯನನ್ನು ಬಿಟ್ಟಿರಲಾರದಂತೆ ಮಾಡಿದೆ. ಹೆಣ್ಣಿಗೆ ಕಷ್ಟ ಮತ್ತು ಸುಖಗಳೆರಡಕ್ಕೂ ಗಂಡು ಅವಶ್ಯಕ. ಅವಳ ಪ್ರೇಮ ಈ ಕಾಮಕ್ಕೆ ಮಳೆ ಪ್ರೇರಕ ಅವಳ ಪ್ರಿಯಕರ ಅದಕ್ಕೆ ಪೂರಕ ಎಂಬ ಭಾವವಿದೆ.

"ಇಂಗಿ ಹೋಯಿತು ಸಂಜೆ ಇರುಳಸೆರಗಲ್ಲಿ
ಭಂಗ ಪಡುತ್ತಿವೆ ತಾರೆ ಮುಗಿಲ ಮರೆಯಲ್ಲಿ
ನಿನ್ನಬಿಟ್ಟಿರಲಾರೆ ಇಂಥ ಹೊತ್ತಲ್ಲಿ
ಹೇಗೆ ತಲುಪಲಿ ಹೇಳು ನಿನ್ನ ಮನೆಯ
ಹೇಗೆ ಸೇರಲಿ ಪ್ರೀತಿ ಪಥದ ಕೊನೆಯ"[೧೫]

ಸಂಜೆಯಿದು ಅಡಗಿ ಹೋಯಿತು. ರಾತ್ರಿಯ ಸೆರಗಿನಲ್ಲಿ ಭಂಗಪಡುತ್ತಿವೆ. ನಕ್ಷತ್ರಗಳು ಮುಗಿಲ ಮರೆಯಲ್ಲಿ ಅಂದರೆ ಮಳೆಯ ಮೋಡವು ಎಲ್ಲೆಡೆ ಆವರಿಸಿದೆ ಕತ್ತಲು ಕವಿದಿದೆ ನಕ್ಷತ್ರಗಳೆ ತೊಂದರೆ ಪಡುತ್ತಿರುವ ಹೊತ್ತಲ್ಲಿ ನಿನ್ನನ್ನು ನಾನು ಬಿಟ್ಟಿರಲಾರೆ ಇನಿಯ ಎಂದಿದ್ದಾಳೆ. ಹೇಗೆ ಸೇರಲಿ ತಲುಪಲಿ ನಿನ್ನ ಮನೆಯ ಎಂದರೆ ತುಂಬ ಮನಸ್ಸಿನಿಂದ ಈ ಕತ್ತಲಾವರಿಸಿದ ಭಯದಿಂದ ದೂರಾಗಲು ಅವಳ ಮನಸ್ಸು ಕಾದಿದೆ. ಮತ್ತೆ ಅವನನ್ನೆ ಪ್ರಶ್ನಿಸುತ್ತಾಳೆ. ಹೇಗೆ ಸೇರಲಿ ಪ್ರೀತಿ ಪಥದ ಕೊನೆಯ ತನ್ನ ಪ್ರೀತಿಯು ನಿಜವಾಗಿ ಯಶಸ್ಸನ್ನು ಕಾಣಬೇಕೆಂದರೆ ನಾನು ತನ್ನ ಪ್ರಿಯತಮನನ್ನು ಸೇರಬೇಕು. ಎಂದರೆ ಮಳೆ ಬಂದರೆ ಪರಿಣಾಮ ಇಷ್ಟೆಲ್ಲಾ ಆಯಿತೆಂದಿದ್ದಾರೆ. ಮುಂದುವರಿದು...

"ಹಳ್ಳ ಕೂಗುತ್ತಲಿದೆ ಮಳೆಯಲ್ಲಿ
ಮನವೂ ಕುದಿಯುತ್ತಲಿದೆ ನಿನ್ನ ನೆನಪಲ್ಲಿ
ನಿನ್ನ ಬಿಟ್ಟಿರಲಾರೆ ಇಂಥ ಹೊತ್ತಲ್ಲಿ
ಹೇಗೆ ಬರಲಿ ಇನಿಯ ನಿನ್ನ ಬಳಿಗೆ
ಕರಗ ಬೇಕೋ ನಿನ್ನ ಪ್ರೀತಿಯೊಳಗೆ"[೧೬]

ಮಳೆಯ ಭೀಕರತೆಯಿಂದ ಹಳ್ಳ ಕೊಳ್ಳಗಳು ರೌದ್ರಾವತಾರವನ್ನು ತಾಳಿದೆ. ಅದು ಕೂಗುತ್ತಿದೆ ಮಳೆಯನ್ನು ಕರೆಯುತ್ತಿದೆ. ಈ ಸಂದರ್ಭದಲ್ಲಿ ಮನಸ್ಸು ಸಹ ಪ್ರಿಯತಮನನ್ನು ನೆನೆಸಿ ಕುದಿಯುತ್ತಲಿದೆ.ಈ ಸಂದರ್ಭದಲ್ಲಿ ನಿನ್ನನ್ನು ಬಿಟ್ಟಿರಲಾರೆ ಇನಿಯ ಎಂದು ಅಂತರಂಗದ ಕೂಗನ್ನು ಆಪ್ಯಾಯಮಾನವಾಗಿ ಹೇಳುತ್ತಿದ್ದಾಳೆ. ಹೇಗೆ ಬರಲಿ ನಿನ್ನ ಬಳಿಗೆ ಇನಿಯ ಎಂದು ಕೇಳುತ್ತ ನನ್ನನ್ನು ಕರೆದೊಯ್ಯೊ ಎಂಬ ಕೂಗಿನೊಂದಿಗೆ ಕರಗ ಬೇಕು ನಿನ್ನ ಪ್ರೀತಿಯೊಳಗೆ ಎಂದಿದ್ದಾರೆ.

ಇಡೀ ಕವನದಲ್ಲಿ ಮಳೆಯ ಅನುಭವದೊಂದಿಗೆ ಪ್ರಿಯತಮೆ ಹೇಗೆ ತನ್ನ ಪ್ರಿಯತಮನನ್ನು ಸೇರಲು ಹಂಬಲಿಸಿದಳು ಎಂಬುದನ್ನು ತಿಳಿಸಲಾಗಿದೆ. ಈ ಮೂಲಕ ಮಳೆಯು ಗಂಡು ಹೆಣ್ಣುಗಳ ಸಂಬಂಧವನ್ನು ಹೇಗೆ ಬೆಸೆಯುತ್ತದೆ. ಆ ಮೂಲಕ ಸಂಬಂಧಗಳನ್ನು ಉಳಿಸಿ ಬೆಳೆಸುತ್ತದೆ ಎಂಬುದನ್ನು ಲಕ್ಷ್ಮೀನಾರಾಯಣ ಭಟ್ಟರು ವಿವರಿಸಿದ್ದಾರೆ.

ಮಳೆ ಬಂದ ಪರಿಣಾಮ ಸಂಬಂಧಗಳ ಮೇಲೆ ಬೀರುವುದನ್ನು ಕವಿಗಳು ಚಂದವಾಗಿ ವಿವರಿಸಿದ್ದಾರೆ. ಮಾತ್ರವಲ್ಲ ಮಳೆಸಂಬಂಧಗಳನ್ನು ಹೇಗೆ ಸೃಷ್ಟಿಸುತ್ತದೆ. ಆ ಸಂಬಂಧವನ್ನು ಹೇಗೆ ಬೆಸೆಯುತ್ತದೆ ಎಂಬುದನ್ನು ವಿವರಿಸಿದ್ದಾರೆ. ಅಂತೆಯೇ ಮಳೆಯು ಪಶು ಪ್ರಾಣಿಗಳ ಸಂಬಂಧವನ್ನು ಉಳಿಸಲು ನೆರವಾಗುತ್ತದೆ ಪಕ್ಷಿ ಪ್ರಾಣಿಗಳನ್ನು ಜೀವನ ಸೃಷ್ಟಿಗೆ ಪ್ರೇರೇಪಿಸುತ್ತದೆ. ಪ್ರೀತಿಯನ್ನು ಹರಿಸಲು

ಸಹಾಯಕವಾಗಿದೆ ಮಳೆಯು ಸಂಬಂಧಗಳನ್ನು ನೆನಪಿಸುತ್ತದೆ. ಹಿಂದಿನ ನೆನಪುಗಳನ್ನು ಪುನಃ ನೆನೆಸಿ ಸೃಷ್ಟಿಸಿ ಜೀವನಕ್ಕೆ ಮುಂದಿನ ದಾರಿಯನ್ನು ತೋರುತ್ತದೆ. ಅಂದರೆ ಮಳೆಯು ಸಂಬಂಧಗಳು ಉಳಿಯುವಂತಹ ಮನಸ್ಥಿತಿಯನ್ನು ಬೆಳೆಸುತ್ತಿದೆ. ಮಳೆಯು ಪ್ರಕೃತಿಯನ್ನು ತಣಿಸುವುದರಲ್ಲಿದೆ. ಕಾಮದ ಮಳೆಯು ಪ್ರೇಮದ ಮಳೆಯ ರೂಪತಾಳಿ ದಾಂಪತ್ಯದ ಮಳೆಯನ್ನು ಸಹ ಕಾವ್ಯದಲ್ಲಿ ತಂದಿದ್ದಾರೆ. ಆ ಮೂಲಕ ಮಳೆಯು ಸಂಬಂಧಗಳ ಒಟ್ಟು ಸ್ವರೂಪದ ಮೇಲೆ ಬೀರುವ ಪರಿಣಾಮ ಭಿನ್ನಭಿನ್ನವಾಗಿದೆ.

**ಕೊನೆ ಟಿಪ್ಪಣಿ**

೧. ಬೆಳಕು ಬೆಡಗು ಸಂಸ್ಕೃತಿ ಚಿಂತನ ಬರಹಗಳು, ಮನು ಬಳಿಗಾರ್ ಪುಟ ಸಂಖ್ಯೆ ೨೯
೨. ಸಮಗ್ರ ಕಾವ್ಯ, ಶಿವರುದ್ರಪ್ಪ ಜಿ. ಎಸ್. ಪುಟ ಸಂಖ್ಯೆ ೭೮
೩. ಅದೇ ಪುಟ
೪. ಅದೇ ಪುಟ
೫. ಎಂ. ವಿ. ಸೀತಾರಾಮಯ್ಯನವರ ಗೇಯ ಕವನಗಳು. (ಸಂ) ದೊಡ್ಡ ರಂಗೇಗೌಡ. ಪುಟ ಸಂಖ್ಯೆ ೫೭
೬. ಬಾಹಿಲಿ, ಯು. ಆರ್. ಅನಂತಮೂರ್ತಿ, ಪುಟ ಸಂಖ್ಯೆ ೩೭
೭. ಅದೇ ಪುಟ
೮. ಅದೇ ಪುಟ
೯. ಅದೇ ಪುಟ
೧೦. ದಾಹತೀರ, ಮಾಲತಿ ಪಟ್ಟಣಶೆಟ್ಟಿ, ಪುಟ ಸಂಖ್ಯೆ ೪೬
೧೧. ಅದೇ ಪುಟ
೧೨. ಅದೇ ಪುಟ
೧೩. ಅದೇ ಪುಟ
೧೪. ಹೀಗೇ ಹಾಳೆಯ ಮೇಲಿನ ಹಾಡು, ಮಮತಾ, ಜಿ, ಸಾಗರ, ಪುಟ ಸಂಖ್ಯೆ ೪೨
೧೫. ಅದೇ ಪುಟ
೧೬. ಅದೇ ಪುಟ
೧೭. ಅದೇ ಪುಟ
೧೮. ಜನಪ್ರಿಯ ಭಾವಗೀತೆಗಳು, ಲಕ್ಷ್ಮೀನಾರಾಯಣಭಟ್ಟ ಎನ್.ಎಸ್. ಪುಟ ಸಂಖ್ಯೆ ೩೫
೧೯. ಅದೇ ಪುಟ
೨೦. ಅದೇ ಪುಟ

## ಅಧ್ಯಾಯ ಏಳು

## ಮಳೆ ಬಂದ ಪರಿಣಾಮ : ಬಡ ಜನರ ಮೇಲೆ

### ಪೀಠಿಕೆ

ಮಳೆಯು ದೇಶದ ಜನರ ಜೀವನಕ್ಕೆ ಆಧಾರ ಸ್ತಂಭವಾಗಿದೆ. ಮಳೆಯನ್ನು ನಂಬಿದ ಕೃಷಿಯನ್ನೇ ಆಶ್ರಯಿಸಿದ ಬಹುಪಾಲು ಕುಟುಂಬಗಳು ದೇಶದಲ್ಲಿವೆ. ಮಳೆಯ ಋತುಮಾನಕ್ಕೆ ತಕ್ಕಂತೆ ಬಂದದ್ದೆ ಆದರೆ ಮಾತ್ರ ಪ್ರಕೃತಿಯಲ್ಲಿನ ಸಕಲ ಜೀವ ಜಾಲವು ನೆಮ್ಮದಿಯಿಂದ ಉಸಿರಾಡಲು ಸಾಧ್ಯ. ಮಳೆ ಬಂದರೆ ಮಾತ್ರ ಸಕಲ ಜೀವ ಜಾಲಕ್ಕೂ ಆಹಾರ ದೊರೆಯುತ್ತದೆ. ಆಹಾರ ಮತ್ತು ನೀರು ದೊರೆಯುತ್ತವೆ. ಮಳೆಯು ಜನರ ಜೀವನವನ್ನು ಎಷ್ಟರಮಟ್ಟಿಗೆ ಪ್ರಭಾವಿಸಿದೆ ಎಂಬುದನ್ನು ಹಿಂದಿನ ಅಧ್ಯಾಯಗಳಾದ ಮಳೆ ಬಂದ ಪರಿಣಾಮ ಸಂಬಂಧಗಳ ಮೇಲೆ ಮತ್ತು ಮಳೆ ಬಂದ ಪರಿಣಾಮ ಜನರ ಮೇಲೆ ಅಧ್ಯಾಯಗಳಲ್ಲಿ ವಿವರವಾಗಿ ಚರ್ಚಿಸಲಾಗಿದೆ. ಮಳೆಯು ಸಂಬಂಧಗಳನ್ನು ಕಟ್ಟುವ ಮತ್ತು ಮನುಷ್ಯ ಸಂಬಂಧಗಳನ್ನು ಬೆಸೆಯುವ ಮುಖ್ಯ ಆಧಾರವಾಗಿದೆ. ಮಳೆ ಸಂಬಂಧಗಳನ್ನು ಬೆಸೆಯುವುದಷ್ಟೇ ಅಲ್ಲ; ಹೊಸ ಜೀವನ ಸೃಷ್ಟಿಗೆ ಪ್ರೇರಕವೂ ಆಗಿದೆ. ಒಟ್ಟಾರೆ ಮಳೆಯು ಮನುಷ್ಯನ ಜೀವನದ ಮೇಲೆ ಗಾಢ ಪರಿಣಾಮವನ್ನು ಬೀರಿದೆ.

ಮಳೆ ಜನರ ಮೇಲೆ ಬೀರುವ ಪ್ರಭಾವದ ಸ್ವರೂಪ ಭಿನ್ನಭಿನ್ನವಾಗಿದೆ. ಮಳೆಯು ತನ್ನದೇ ಆದ ಪ್ರಭಾವವನ್ನು ಬಡಜನರ ಮೇಲೆ ಬೀರಿದೆ. ಮಳೆಯ ಪ್ರಭಾವವನ್ನು ಪ್ರವಾಹ ಜಲಪ್ರಳಯಗಳ ಹಿನ್ನೆಲೆಯಲ್ಲಿ ನೋಡಿದಾಗ ಅದು ಸ್ಪಷ್ಟವಾಗುತ್ತದೆ. ಮಳೆಯೂ ಪ್ರವಾಹವನ್ನು ಸೃಷ್ಟಿಸಿದ ಸಂದರ್ಭಗಳು ಅನೇಕ. ಕಳೆದ ವರ್ಷ ಜಮ್ಮ ಮತ್ತು ಶ್ರೀನಗರದಲ್ಲಿ ಭಯಾನಕ ಜಲ ಪ್ರಳಯವನ್ನು ಮಳೆ ಸೃಷ್ಠಿಸಿತು. ಪ್ರವಾಹದ ಪರಿಣಾಮದಿಂದ ಅಲ್ಲಿನ ಜನತೆ ನಿಜವಾಗಿ ನಲುಗಿಹೋಗಿದ್ದಾರೆ. ಮೃತರ ಸಂಖ್ಯೆ ಮೂರುನೂರನ್ನು ದಾಟಿತ್ತು. ಲಕ್ಷಾಂತರ ಮಂದಿ ಪ್ರವಾಹಕ್ಕೆ ಸಿಲುಕಿದರು. ಪ್ರವಾಹಕ್ಕೆ ಸಿಕ್ಕ ಜನರಲ್ಲಿ ಬಹುತೇಕ ಜನರು ಬಡವರಾಗಿದ್ದುದು ವಿಶೇಷ. ಈ ಮೂಲಕ ನಾನು ಹೇಳಲು ಪ್ರಯತ್ನಿಸುತ್ತಿರುವುದೇನೆಂದರೆ ಮಳೆಯಿಂದ ಆಗುವ ಲಾಭವನ್ನು ಸಮಾಜದ ಒಂದು ವರ್ಗ ಪಡೆದರೆ ಅದರಿಂದ ಉಂಟಾಗುವ ನಷ್ಟ ನೋವನ್ನು ಮತ್ತೊಂದು ವರ್ಗ ಪಡೆಯುತ್ತದೆ. ಈ ಪ್ರವಾಹದ ಪರಿಣಾಮ ಹೇಗಿತ್ತೆಂದರೆ ಅಲ್ಲಿ ಬದುಕುಳಿದ ಜನರು ತಮ್ಮನ್ನು ರಕ್ಷಿಸಲು ಬಂದವರ ಮೇಲೆಯೇ ಕಲ್ಲು ತೂರಾಟ ನಡೆಸಿ ದಾಂದಲೆ ನಡೆಸಿದರು. ಅಂದರೆ ಮಳೆ ಅವರನ್ನು ಎಷ್ಟರ ಮಟ್ಟಿಗೆ ಕಾಡಿತ್ತು ಅವರ ಜೀವನಕ್ಕೆ ಎಂತಹ ಕೊಡಲಿ ಪೆಟ್ಟನ್ನು ನೀಡಿತ್ತೆಂಬುದನ್ನು ಕಲ್ಪಿಸಿಕೊಳ್ಳಬೇಕಾಗುತ್ತದೆ.

ಮಳೆಯ ಪ್ರವಾಹ ಬಡಜನರನ್ನು ಹಳಿಗಳಲ್ಲಿ ಒಂದು ರೀತಿ ಕಾಡಿದರೆ ಮಹಾ ನಗರಗಳಲ್ಲಿ ಮತ್ತೊಂದು ರೀತಿಯಲ್ಲಿ ಕಾಡುತ್ತದೆ. ಉದ್ಯೋಗವನ್ನು ಅರಿಸಿ ಮಹಾ ನಗರಗಳಿಗೆ ಬರುವಂತಹ ಜನರಿಗೆ ಸರಿಯಾದ ಸೂರು ಸಿಗುವುದು ಕಷ್ಟ ಉದ್ಯೋಗವನ್ನು ಅರಿಸಿಬಂದ ಶೇ. ನಲವತ್ತರಷ್ಟು ರಷ್ಟು ಜನರು ಕೊಳಗೇರಿಗಳಲ್ಲಿ ವಾಸ ಮಾಡುತ್ತಾರೆ. ಈ ಕೊಳಗೇರಿಗಳ ಸ್ವರೂಪವನ್ನು ನೆನೆಸಿದರೆ ಹೀನ ಸ್ಥಿತಿಯಲ್ಲಿ ಇಂದಿನ ಜನತೆಯಲ್ಲಿ ಇದೆ. ಆದರೆ ಆ ಕೊಳಗೇರಿಯೇ ಸಾವಿರಾರು ಜನರು ಆಶ್ರಯ ತಾಣವಾಗಿರುತ್ತದೆ. ಇಂತಹ ಕೊಳಗೇರಿಗಳ ಮೇಲೆ ಮಳೆ ಬಂದ ಪರಿಣಾಮ ಹೇಗಿರುತ್ತದೆಂಬುದನ್ನು ಊಹಿಸಲು ಕಷ್ಟವಾಗಿರುತ್ತದೆ. ಮಳೆಯು ಜನರ ಜೀವನವನ್ನು ಅಲ್ಲೋಲ ಕಲ್ಲೋಲಗೊಳಿಸುತ್ತದೆ. ಜೀವ ಕೊಡುವ ತಾಯಿಯೇ ಕತ್ತು ಹಿಸುಕಿ ಸಾಯಿಸಿದಾಗ ಮಾಡುವುದೇನು? ಎಂಬ ಪ್ರಶ್ನೆ ಎದುರಾದಂತೆ ಕೊಳಗೇರಿಗಳಲ್ಲಿ ಬಡ ಜನರ ಜೀವನ ಅತ್ಯಂತ ನಿಕೃಷ್ಟ ಸ್ವರೂಪವನ್ನು ಪಡೆಯುತ್ತದೆ. ಮಳೆಯನ್ನು ಕುರಿತು ಡಿ. ಆರ್. ನಾಗರಾಜ್ ಅವರು "ಮಳೆ ಬೇಕು ನಿಜ. ಆದರೆ, ನಗರಗಳ ಬಡವರಿಗೆ ಶಾಪ, ಮಳೆ. ಒಮ್ಮೆ ಮಳೆ ಮನಸ್ಸಿಗೆ ತುಂಬ ಪ್ರಿಯವಾದ ಲಯ ತರುತ್ತದೆ. ಇನ್ನೊಮ್ಮೆ ಅಸಾಧ್ಯ ಕೆಸರಲ್ಲಿ ಮನಸ್ಸನ್ನು ಹೂತು ಹಾಕಿ ಬಿಡುತ್ತದೆ"[೧] ಎಂದಿದ್ದಾರೆ. ಹಳ್ಳಿಗಳಲ್ಲಿ

ಮಳೆಯು ಬಡ ಜನರ ಮೇಲೆ ಭಿನ್ನ ರೀತಿಯ ಪರಿಣಾಮವನ್ನು ಬೀರುತ್ತದೆ. ಮಳೆಯನ್ನು ಆಶ್ರಯಿಸಿ ರೈತ ಬೆಳೆಯನ್ನು ಬೆಳೆಯುತ್ತಾನೆ. ಅಂತಹ ಮಳೆಯೇ ಕೈಕೊಟ್ಟಾಗ ರೈತನಿಗೆ ಅಷ್ಟೇ ಅಲ್ಲಾ ಇಡೀ ದೇಶಕ್ಕೆ ಅನ್ನವಿಲ್ಲದಹಾಗೆ ಆಗುತ್ತದೆ. ಹಳ್ಳಿಗಳಲ್ಲಿ ಕೃಷಿಯನ್ನು ಅವಲಂಬಿಸಿರುವ ಬಹುತೇಕರು ಬಡವರೆ ಮಳೆಯು ರೈತರ ಜೀವನದಲ್ಲಿ ಎರಡು ರೀತಿಯಲ್ಲಿ ಕಾಡುತ್ತದೆ. ಒಮ್ಮೆ ಮಳೆಬರದೆ ಬೆಳೆಯನ್ನು ಒಣಗಿಸುವುದು ಅಥವಾ ಸರಿಯಾದ ಸಮಯಕ್ಕೆ ಬರದೇ ಬೆಳೆ ನಾಶವಾಗಲು ಕಾರಣವಾಗುವುದು ಮತ್ತು ಅಕಾಲಿಕ ಮಳೆಯಂತೆ ಅತಿವೃಷ್ಟಿಯಿಂದ ಬೆಳೆದ ಬೆಳೆಯನ್ನೆ ನಾಶಮಾಡುವುದು. ಆ ಮೂಲಕ ರೈತನ ಜೀವನವನ್ನು ಹಾಳುಮಾಡುತ್ತಿದೆ. ಹೀಗೆ ಮಳೆ ರೈತ ಹಾಗೂ ಆತನ ಕುಟುಂಬದ ಶ್ರಮವನ್ನೆಲ್ಲ ಹಾಳು ಮಾಡಿ ತಿನ್ನಲು ಗಂಜಿಯಿಲ್ಲದಂತೆ ಮಾಡುತ್ತದೆ. ಈ ಮಳೆಯಿಂದಾಗಿ ರೈತ ಇಂದು ಆತ್ಮಹತ್ಯೆಗೆ ಶರಗಾಗಿ ಶರಣಾಗಿ ತನ್ನ ಜೀವನವನ್ನು ಕಳೆದು ಕೊಳ್ಳುತ್ತಿದ್ದಾನೆ. ಅದಕ್ಕೆ ಪ್ರತಿಯಾಗಿ ಸರ್ಕಾರದಿಂದ ಮೊಸಳೆ ಕಣ್ಣೀರಿನ ರೀತಿ ಕಣ್ಣೊರೆಸುವ ನಾಟಕ!

ಇದಿಷ್ಟು ಬಡ ಕೃಷಿಕರ ಮೇಲಿನ ಪರಿಣಾಮವಾದರೆ ಕೃಷಿ ಭೂಮಿಯೂ ಇರದ ಕೇವಲ ಕೂಲಿಯನ್ನೇ ನಂಬಿರುವ ಬಡವರ ಕತೆ ಇನ್ನೊಂದು ರೀತಿಯ ಸ್ವರೂಪವನ್ನು ಪಡೆದಿದೆ. ಮಳೆ ಆದರೆ ಕೂಲಿ ಮಾಡುವ ಎಷ್ಟೋ ಕುಟುಂಬಗಳು ಇಂದಿಗೂ ಭಾರತದಲ್ಲಿವೆ. ಮಳೆಯು ಬರದೇ ಕೂಲಿ ಸಿಗದೆ ಒಂದೊತ್ತಿನ ಊಟಕ್ಕೂ ಕಷ್ಟ ಪಡುವ ಅನೇಕ ಬಡ ಜನರ ಮೇಲೆ ಮಳೆ ಮತ್ತೊಂದು ರೀತಿಯ ಪರಿಣಾಮವನ್ನು ಬೀರುತ್ತದೆ. ದಿನವಿಡೀ ಮಳೆ ಸುರಿದು ಕೂಲಿ ಸಿಗದಂತೆ ಮಾಡುವ ಪರಿಸ್ಥಿತಿಗಳು ಅನೇಕ ಇವೆ. ಮಳೆಯು ಬಡಜನರ ಜೀವನದ ಮೇಲೆ ಕೆಟ್ಟ ರೀತಿಯ ಪರಿಣಾಮ ಬೀರಿದೆ. ಇದಕ್ಕೆ ಮಳೆಮಾತ್ರ ಕಾರಣವಾಗಿರದೆ ನಮ್ಮ ಸಮಾಜದ ವ್ಯತ್ಯಾಸದ ವ್ಯವಸ್ಥೆಯೇ ಹಾಗಿದೆ. ಬಡತನ ನಿರ್ಮೂಲನೆಗಾಗಿ ಸರ್ಕಾರ ನೆಪಮಾತ್ರಕ್ಕೆ ರೂಪಿಸುವ ಯೋಜನೆಗಳು ಅದರಿಂದ ಬರುವ ಹಣವನ್ನು ತಾವೆ ನುಂಗಿ ಬರಿ ಪ್ರವಾಸ ಮೋಜುಗಳಲ್ಲೇ ತಮ್ಮ ಅಧಿಕಾರವದಿಯನ್ನು ಮುಗಿಸಿ ಬಿಡುತ್ತಾರೆ. ಮಳೆಯು ಸೃಷ್ಟಿಸಿದ ಅನಾಹುತವನ್ನು ಪರಿಹರಿಸುವ ನೆಪದಲ್ಲಿ ಸಮೀಕ್ಷೆಗಳನ್ನು ನಡೆಸಿ ಅದರಿಂದ ಬರುವ ಹಣವನ್ನು ತಾವೇ ನುಂಗುವಂತಹ ಬಕಪಕ್ಷಿಗಳು ನಮ್ಮ ರಾಜಕೀಯ ನಾಯಕರಾಗಿದ್ದಾರೆ.

ಹೀಗೆ ಭಿನ್ನ ಭಿನ್ನ ಆಯಾಮಗಳನ್ನು ಪಡೆದಿರುವ ಮಳೆಯ ಪರಿಣಾಮ ಬಡಜನರನ್ನು ನಾನಾರೀತಿಯಲ್ಲಿ ಹಿಂಸಿಸುತ್ತದೆ. ಈ ರೀತಿಯ ಪರಿಣಾಮಗಳನ್ನು ಆಧುನಿಕ ಕನ್ನಡ ಕವಿಗಳು ಸಹ ಗುರುತಿಸುವ ಪ್ರಯತ್ನ ಮಾಡಿದ್ದಾರೆ. ಅಂತಹ ಕೆಲವು ಉದಾಹರಣೆಗಳನ್ನು ನಾವು ಕಾಣಬಹುದು.

ಸಿ. ಹನುಮಂತಯ್ಯ ಅವರು ತಮ್ಮ ಕರ್ಣರಾಗ ಎಂಬ ಕವನ ಸಂಕಲದಲ್ಲಿನ ಮಳೆ ಕವನದಲ್ಲಿ ಮಳೆ ಬಂದ ಪರಿಣಾಮ ಬಡಜನರ ಮೇಲೆ ಹೇಗಾಗಿದೆ ಎಂಬುದನ್ನು ಕಟ್ಟಿಕೊಡುವ ಪ್ರಯತ್ನ ಮಾಡಿದ್ದಾರೆ. ಮಳೆ ಮುಖ್ಯವಾಗಿ ಎರಡು ರೀತಿಯಲ್ಲಿ ಬಡ ಜನರ ಮೇಲೆ ಪರಿಣಾಮ ಬೀರುತ್ತದೆ ಎಂಬುದನ್ನು ಆರಂಭದಲ್ಲಿಯೇ ಉಲ್ಲೇಖಿಸಲಾಗಿದೆ.

"ವರುಷಗಳಿಂದ ಮಳೆಗಾಲದ ನೆಲ
ಬಿರುಕು ಬಿದ್ದು ಬಾಯ್ದೆರಿದಿದೆ ಬಿಲ
ಊರೂರೆ ಮಾಯ ಖಾಲಿ ಮನೆಗಳು ಗಾಯ
ಇಲಿ ಬೆಕ್ಕು ನರಿ ನಾಯಿ
ಬಟಾಬಯಲು ಉಸಿರು ಧಗೆಯ ಹೊಗೆ ಬಿಸಿಬಿಸಿ ಗಾಳಿ"[1]

ಮಳೆ ಬರದೆ ಬಡಜನರ ಬದುಕನ್ನು ಹಾಳುಮಾಡಿದೆ. ವರ್ಷಗಳಿಂದ ಕಾದರೂ ಮಳೆ ಬರುತ್ತಿಲ್ಲ ಮಳೆ ಬರುವುದಿಲ್ಲ. ಈ ಮಳೆ ಬರದೆ ನೆಲವೆಲ್ಲ ಬಿರುಕು ಬಿಟ್ಟಿದೆ. ಬರಗಾಲದ ಚಾಯೆ ಎಲ್ಲೆಡೆಯೂ

ಮೂಡಿದೆ. ಈ ಮಳೆಯನ್ನು ಕಾದುಕುಳಿತ ಭೂಮಿಯು ಸೀಳು ಸೀಳಾಗಿಬಿಟ್ಟದೆ. ಅದು ತನ್ನ ಬಾಯಿಯನ್ನು ತೆರೆದುಕೊಂಡು ಕಾದು ಕುಳಿತಿದೆ. ಮಳೆಯನ್ನೆ ನಂಬಿಕೊಂಡಿದ್ದ ಬಡಜನರು ಊರನ್ನೇ ತೊರೆದು ಗುಳೆ ಹೋಗಿದ್ದಾರೆ ಎಂಬಂತೆ ಊರುರು ಮಾಯ ಎಲ್ಲವೂ ಕಾಲಿ ಮನೆಗಳು ಎಲ್ಲೆಡೆಯೂ ಬರದ ಚಾಯೆ ಮೂಡಿದೆ. ಮನೆಯಲ್ಲಿಯೂ ಒಬ್ಬರು ಇಲ್ಲದಂತಹ ಸ್ಥಿತಿಯನ್ನು ಮಳೆ ಸೃಷ್ಟಿಸಿದೆ. ಮಳೆ ಇಲ್ಲದಿರುವುದರಿಂದ ಬೆಕ್ಕು ನರಿ ನಾಯಿಗಳು ಊರನ್ನು ಸೇರಿವೆ ಎಂದರೆ ಬರಗಾಲದ ಪರಿಸ್ಥಿತಿ ಎಷ್ಟರ ಮಟ್ಟಗಿದೆ ಎಂಬುದನ್ನು ನಾವು ಗಮನಿಸಬೇಕು. ಬಟಾಬಯಲು ಉಸಿರು ಧಗೆಯ ಹೊಗೆ ಬಿಸಿ ಬಿಸಿ ಗಾಳಿ ಅಂದರೆ ಮಳೆಯಿಲ್ಲದೆ ಭೂಮಿ ಮತ್ತು ವಾತಾವರಣ ಎರಡು ಬಿಸಿಯಾಗಿವೆ ಬಿಸಿಯ ದಗೆಯಿಂದ ಉಸಿರು ಸಹ ಮತ್ತಷ್ಟು ಬಿಸಿಯಾಗಿದೆ.

ಮುಂದುವರಿದು...

"ಹಿಡಿಶಾಪ ಸೂರ್ಯನಿಗೆ ಒಮ್ಮೆಯೋ
ಮರೆಯಾಗದ್ದೇಕೆ ಚಿಕ್ಕಿ ಚಂದ್ರಮರೆಗೆ
ತೂಪರಿಕೆ ಮೋಡಗಳು ಕಾಣೆಯಾಗದ್ದೇಕೆ
ಹೆಣ್ಣುಗಳು ಹೆಣ್ಣಲ್ಲ ಕಡ್ಡಿ ಕಸಪರಿಕೆ
ಗಂಡುಗಳು ಗಂಡಲ್ಲ ತೊಡಿರಟ್ಟ ಬೇಲಿ
ಸಾಲು ಸಾಲು ಸಂತೆ ಮಕ್ಕಳು ಬರಿಕಂತೆ
ಮೈಲಿ ಮೈಲಿ ಉದ್ದಜಾಲಿ"[೨]

ಮಳೆಯು ಬರದೆ ಇರುವ ಕಾರಣದಿಂದಾಗಿ ಸೂರ್ಯ ಸದಾ ಆಗಸದಲ್ಲಿ ಕಾಣುವನು. ಅದಕ್ಕೆ ನೊಂದ ಜನ ಶಾಪ ಹಾಕುತ್ತಾರೆ. ಸೂರ್ಯನ ಶಾಖದಿಂದ ಕಂಗೆಟ್ಟು ಸೂರ್ಯನನ್ನು ದೂರುತ್ತಾರೆ. ಸೂರ್ಯನಿಗೆ ಹಿಡಿಶಾಪ ಹಾಕುತ್ತಾರೆ. ಅಷ್ಟೇ ಅಲ್ಲ ರಾತ್ರಿಯ ಹೊತ್ತು ಬೆಳಕನ್ನು ನೀಡುವ ಚಂದ್ರ ಚುಕ್ಕಿಗಳನ್ನು ಸಹ ದೂರುತ್ತಾರೆ.ಕಾರಣ ಮೋಡಗಳು ಕಾಣದೆ ಕೇವಲ ಚಂದ್ರ ಚುಕ್ಕಿಗಳು ಕಾಣುತ್ತವೆ. ಆಗಸದಲ್ಲಿ ಎಂಬ ಬೇಸರದ ಚಾಯೆ ಇರುವುದನ್ನು ಕಾಣಬಹುದು. ಹೆಣ್ಣುಗಳನ್ನ ಹೆಣ್ಣಿನಂತೆ ನಡೆಸಿಕೊಳ್ಳುತ್ತಿಲ್ಲ. ಕಡ್ಡಿ ಕಸಪರಿಕೆ ಗಂಡುಗಳು ಗಂಡಲ್ಲ ತೊಡೆರಟ್ಟೆ ಚೀಲ ಎಂದಿದ್ದಾರೆ. ಅಂದರೆ ಗಂಡು ಹೆಣ್ಣಿನ ಕೆಲಸಗಳೇನೆಂಬುದನ್ನು ತಿಳಿಸಿದ್ದಾರೆ. ಮಳೆ ಬರದೆ ಇದ್ದರೂ ಎಲ್ಲೆಡೆಯೂ ಸಾಲುಸಾಲಾಗಿ ಸಂತೆಗಳು ಸೇರಿವೆ ಮಕ್ಕಳು ಬರಿಕಂತೆ ಎಂದಿದ್ದಾರೆ. ಮೈಲಿ ಮೈಲಿ ಉದ್ದ ಜಾಲಿಜಗಲಿ ಸಿದ್ದ ಅಂದರೆ ನೆರಳು ನೀಡುವ ಮರಗಳು ಸಹ ಇಲ್ಲ ಕೇವಲ ಜಾಲಿಯ ಮರಗಳು ಮಾತ್ರವೇ ಇವೆ ಎಂದಿದ್ದಾರೆ.

ಮುಂದುವರೆದು...

"ವರ್ಷದಿಂದ ಮಳೆ ಕಾಣದ ನೆಲ
ಬನಿರುಕುಬಿದ್ದ ಬಾಯ್ದೆಗೆದಿದೆ ಬಿಲ
ಕಾಂಕ್ರೇಟಿನ ಕಾಡಲ್ಲಿ ಉದ್ದುದ ಹಾಡು
ಬಟ್ಟೆ ಇರದ ಮೈಲಿ ಪ್ಯಾಷನ್ ಷೇಕೈಯಿ
ದೇಶದಿಂದ ದೇಶಕ್ಕೆ ಕ್ರಿಕೇಟಿನ ಮ್ಯೂನಿಯ
ಪ್ರತಿವಾರದ ಸಿನಿಮಾಕ್ಕೆ ಸಾಲುಗಟ್ಟವೀರರು
ಬೂಸ್ಟ್ ಕುಡಿದ ಸಚಿನ್ ಮನೆಗೆ ದಾಂಡು ಹಿಡಿದ ಧೀರರು"[೩]

ಮಳೆ ಬರದೆ ವರ್ಷಗಳೇ ಕಳೆಯುತ್ತಿದೆ. ವರ್ಷಗಳಿಂದ ಮಳೆ ಬರದ ಕಾರಣ ನೆಲವೆಲ್ಲ ಬಿರುಕುಬಿಟ್ಟಿದೆ. ಅದು ಬಿಲದಂತೆ ಬಾಯ್ದೆರೆದಿದೆ. ಅದರ ಮಧ್ಯೆ ಕಾಡಿನಲ್ಲಿ ಕಾಂಕ್ರೇಟಿನ ಕಾಡು ತಲೆಎತ್ತಿದೆ. ಅಲ್ಲಿ ಹಾಡು ಮೋಜು ಮಸ್ತಿಗಳು ನಡೆಯುತ್ತಿವೆ. ಹೀಗೆ ಕವನ ಬಡಜನರ ಚಿತ್ರಣದಿಂದ ಇದೇ ಸಂದರ್ಭದ

ಬೇರೆ ಜನರ ವರ್ತನೆಯನ್ನು ತೆರೆದಿಡುವ ಪ್ರಯತ್ನದತ್ತ ಮಾಡಿದ್ದಾರೆ. ಮುಂದುವರೆದು ಹೇಳುತ್ತಾರೆ. ಬಟ್ಟೆಯಿರದ ಮೈ ಘೋ ಫ್ಯಾಷನ್ ಕೈಯಿ ಎಂದಿದ್ದಾರೆ. ಅಂದರೆ ಬಟ್ಟೆಯನ್ನು ತೊಡಲು ಇರದ ಜನರೊಂದಡೆ ಇದ್ದರೆ ಫ್ಯಾಷನ್ ಮಾಡುವ ಮಂದಿ ಒಟ್ಟಿಗೆ ಇದ್ದಾರೆ. ಈಮಧ್ಯೆ ದೇಶ ದೇಶಗಳ ಮಧ್ಯೆ ಕ್ರಿಕೆಟ್ ಮ್ಯೂನಿಯ ಬೇರೆ ದೇಶಕ್ಕೆ ಮಳೆ ಕಾಣದ ಜನ ಒಂದೆಡೆ ಮಳೆಗಾಗಿ ಹಪ ಹಪಿಸುತ್ತಿರುವಾಗ ಕ್ರಿಕೆಟ್ ಮ್ಯೂನಿಯಾ ಜೊತೆಗೆ ವಾರದ ಸಿನಿಮಾಕ್ಕೆ ಜನ ಸಾಲುಗಟ್ಟಿ ನಿಂತಿದ್ದಾರೆ ಎನ್ನುತ್ತಾರೆ. ಅವರನ್ನೂ ವೀರರು ಎಂದು ಕುಹಕ ರೀತಿಯಲ್ಲಿ ಹಂಗಿಸಿದ್ದಾರೆ. ಈ ವೀರರು ಸಚಿನ್ ಮನೆಯ ಸುತ್ತಲೂ ಹೀಗೆಯೇ ಇರುತ್ತಾರೆ ಎಂದಿದ್ದಾರೆ.

ಮುಂದುವರೆದು...

"ನಿತ್ಯ ನಡೆವ ಸೀರಿಯಲ್ಲು ಪ್ರೀತಿಯದೆಕಳೆ
ಶ್ರೀಮಂತರ ಕೈತೋಟಕೆ ಕುಡಿಯುವ ನೀರಿನ ಹೊಳೆ
ಟಾರುರಸ್ತೆ ಮೇಲ್ಸೇತುವೆ ಜಗಮಗಿಸುವ ದೀಪಸಾಲು
ಬಾನೆತ್ತರದ ಮಹಡಿಯಲ್ಲಿ ಬರಿಮೈಬಾಲೆ
ದೇಶ ವಿದೇಶದಿಂದ ಡಾಲರುಗಳಲಿಲೆ
ಅದೇ ಮಂತ್ರಿ ಅದೇ ಕಾರು ಸರ್ಕಾರ ವಿದೆನೋಡ"[4]

ಹೀಗೆ ಮಳೆ ಬರದೆ ಕೆಲವು ಜನ ಕಂಗಾಲಾಗಿದ್ದರೂ ಏನೂ ಸಂಬಂಧವೇ ಇಲ್ಲದಂತೆ ಜನ ನಡೆದುಕೊಳ್ಳುತ್ತಿರುವುದನ್ನು ಕವಿ ಗುರುತಿಸಿದ್ದಾರೆ. ದಿನನಿತ್ಯದಂತೆ ಅದೇ ಸೀರಿಯಲ್ಲು ಆ ಸೀರಿಯಲ್‌ನಲ್ಲಿ ಅದೇ ಪ್ರೀತಿಯ ಕಳೆ ಎಂಬಲ್ಲಿ ಬದಲಾವಣೆಯೇ ಇಲ್ಲ ಎಂಬ ವಿಶಾದದ ಛಾಯೆ ಇದೆ.ಮುಂದುವರೆದು ಕೆಲವು ಜನರಿಗೆ ಕುಡಿಯಲು ನೀರು ಸಿಗುತ್ತಿಲ್ಲ ಆದರೆ ಶ್ರೀಮಂತರು ತೋಟಕೆ ಕುಡಿಯುವ ನೀರನ್ನೇ ಹೊಳೆಯಾಗಿ ಹಾಸುತ್ತಿದ್ದಾರೆ. ಇಲ್ಲಿನ ವ್ಯತ್ಯಾಸವನ್ನು ಕಟ್ಟಿಕೊಡುತ್ತಿದ್ದಾರೆ. ಟಾರು ರಸ್ತೆ ಮೇಲ್ಸೇತುವೆ ಜಗಮಗಿಸುವ ದೀಪಸಾಲು ಬಾನೆತ್ತರದ ಮಹಡಿಯಲ್ಲಿ ತಿರುಗುವ ಹೋಟೆಲ ಕ್ಯೂ ನಿಂತ ಲಿಪ್ಪಿನಲ್ಲಿ ಬರಿಮೈ ಬಾಲೆ ಎಂದರೆ ನಗರದಲ್ಲಿನ ಜನ ಜೀವನ ಪರಿಸರ ವ್ಯವಸ್ಥೆಯನ್ನು ತಿಳಿಸುತ್ತಿದ್ದಾರೆ.ದೇಶವಿದೇಶದಿಂದ ಡಾಲರ್‌ಗಳ ಲೀಲೆ ಇದೆಲ್ಲ ಎನ್ನುತ್ತಾರೆ. ಅದೇ ಮಂತ್ರಿ ಅದೇ ಕಾರು ಸರ್ಕಾರವಿದೆ ನೋಡ ಎನ್ನುವ ಮೂಲಕ ಬದಲಾವಣೆ ಶೂನ್ಯವೆಂದಿದ್ದಾರೆ.

ಈ ರೀತಿಯಾಗಿ ಹನುಮಂತಯ್ಯನವರು ಮಳೆ ಬರದೆ ಕಂಗಾಲಾಗಿರುವ ಒಂದು ವರ್ಗವನ್ನು ಚಿತ್ರಿಸುತ್ತಾರೆ. ಮತ್ತೊಂದೆಡೆ ಅದಕ್ಕೆ ಸಂಬಂಧವೇ ಇರದ ನಗರದ ಶ್ರೀಮಂತ ವರ್ಗದ ಜೀವನ ಪರಿಯನ್ನು ತೆರೆದಿಡುತ್ತಾರೆ. ತಿನ್ನಲು ಅನ್ನವಿರದೆ ಕೂಲಿಯನ್ನೇ ನಂಬಿದ ಜನರಿಗೆ ಕುಡಿಯಲು ನೀರು ಸಹ ಸಿಗುತ್ತಿಲ್ಲ. ಆದರೆ ಕುಡಿಯುವ ನೀರು ಹೊಳೆಯರೀತಿ ಶ್ರೀಮಂತರ ತೋಟಕ್ಕೆ ಹರಿಯುತ್ತದೆ ಎಂದಿದ್ದಾರೆ. ಮಳೆ ಕಾಣದೆ ಒಂದೆಡೆ ನೆಲ ಬಾಯಿಬಾಯಿ ಬಿಡುತ್ತಿದ್ದರೆ ಮತ್ತೊಂದೆಡೆ ಕಾಂಕ್ರೇಟ್ ಟಾರು ರಸ್ತೆಗಳು ಅದಕ್ಕೆ ಮೇಲ್ಸೇತುವೆಗಳು ಕಂಗೊಳಿಸುತ್ತಿವೆ. ಎಂದರೆ ಇಲ್ಲಿನ ವ್ಯವಸ್ಥೆಯು ಹೇಗೆ ಭಿನ್ನರೂಪ ಪಡೆದ ತಾರತಮ್ಯ ಮಾಡುತ್ತಿದೆ ಎಂಬುದನ್ನು ತಿಳಿಸುತ್ತಾರೆ. ಒಟ್ಟಾರೆಯಾಗಿ ಮಳೆ ಬರದೆ ಇರುವುದನ್ನು ಲೆಕ್ಕಕ್ಕೆ ತೆಗೆದುಕೊಳ್ಳದ ಒಂದು ಜೀವನ ವ್ಯವಸ್ಥೆ ಇಂದು ಸೃಷ್ಟಿಯಾಗಿದೆ. ಆ ಮೂಲಕ ಒಟ್ಟು ವ್ಯವಸ್ಥೆಯನ್ನು ಬದಲಾಯಿಸುವ ಅವಶ್ಯಕತೆ ಇದೆ ಅದರ ಮಿಶ್ರಣವನ್ನು ತೋರಿಸುತ್ತ ಇದು ಬದಲಾವಣೆಗೆ ಪರ್ವಕಾಲವೆಂಬ ಸಂದೇಶವನ್ನು ನೀಡಿದ್ದಾರೆ.

ಎಸ್. ಎಸ್. ಬಸು ಪಟ್ಟದ ಅವರು ರತ್ನದೀಪ ಎಂಬ ಕವನ ಸಂಕಲನದಲ್ಲಿನ 'ಮಳೆ' ಎಂಬ ಕವನದಲ್ಲಿ ಮಳೆ ಬಂದ ಪರಿಣಾಮ ಬಡಜನರ ಮೇಲಾಗಿರುವುದನ್ನು ಗುರುತಿಸುವ ಪ್ರಯತ್ನ ಮಾಡಿದ್ದಾರೆ.

ಅದು..

"ಬಾಯ್ ಬಾಯ್ ಬಿಡುತಲಿ ಹೌಹಾರಿದೆ ಜನ
ಇಳಿಯ ಒಣಗಿದ ಬೆಳೆಯಿಂದ
ಜೀವನ ಜಾತಗಳು ಜೀವಿಸುವಾಸೆಯ
ತಳೆದವು ಸಧ್ಯದ ಮಳೆಯಿಂದ
ಹೊಳೆಯ ದಡದ ಬಾಡಿದ ಸಸಿಗಳು
ಬೆಳೆವುವು ತುಂಬಿದ ಹೊಳೆಯಿಂದ
ಹಸಿರಲಿ ಹೊಚ್ಚಿ ಹಸಿರಲಿ ಮುಚ್ಚಿ
ಕಣ್ ಮನ ತಣಿಸುವುದಿಳೆಯಿಂದ"[೨೫]

ಮಳೆ ಬರದೆ ತನ್ನ ಬೆಳೆಯೆಲ್ಲ ಒಣಗಿದ ಸಂದರ್ಭದಲ್ಲಿ ಬಾಯಿಯನ್ನು ಬಿಡುತ್ತಲಿ ಹೌ ಹಾರಿದೆ ಜನ ಅದಕ್ಕೆ ಕಾರಣ ಮಳೆಯು ಬಾರದೇ ಇರುವುದಾಗಿದೆ. ನಂತರ ಮಳೆ ಬರುತ್ತದೆ. ಬಂದ ಮಳೆಯಿಂದಾಗಿ ಭೂಮಿಯಲ್ಲಿರುವ ಸಕಲ ಜೀವಗಳು ಜೀವಿಸುವ ಆಸೆಯನ್ನು ಪಡೆದಿವೆ. ಸದ್ಯದ ಮಳೆಯಿಂದ ಎನ್ನುತ್ತಾರೆ. ಹೊಳೆಯದಡದಲ್ಲಿನ ಬಾಡಿದ ಸಸಿಗಳು ಈಗ ಮಳೆ ಬಂದಿದ್ದರಿಂದ ಚಿಗುರುತ್ತವೆ. ಈ ಮಳೆ ಬಂದಿದ್ದರಿಂದ ಇಡಿ ಭೂಮಿಯು ಹಸಿರಿನಿಂದ ಕೂಡಿರುತ್ತದೆ ಎಲ್ಲರ ಮನಸ್ಸನ್ನು ತಣಿಸುತ್ತದೆ. ಮಳೆಯು ಬಡ ರೈತರ ಜೀವನದಲ್ಲಿ ಆಡುವ ಜೂಜಾಟವನ್ನು ಬಸು ಅವರ ಗುರುತಿಸಿದ್ದಾರೆ. ಈ ಮಳೆಯು ಕಾಲ ಕಾಲಕ್ಕೆ ಸರಿಯಾಗಿ ಬರದೆ ರೈತರ ಬೆಳೆಯೆಲ್ಲಾ ಒಣಗಿದ ಮೇಲೆ ಬರುರುತ್ತದೆ. ಬಂದು ಜೀವ ಉಳಿಸಿಕೊಳ್ಳಲು ಅವಕಾಶ ಮಾಡಿಕೊಡುತ್ತದೆ ಎಂದಿದ್ದಾರೆ. ಈ ಮೂಲಕ ಮಳೆಯ ಸೋಗಲಾಡಿತನವನ್ನು ಗುರುತಿಸಿದ್ದಾರೆ.

ಲೀಲಾ ಕಲಕೋಟಿಯವರು ತಮ್ಮ 'ಶ್ರಾವಣದ ಸೆರಗು' ಎಂಬ ಕವನ ಸಂಕಲನದ ಮಳೆ ಕವನದಲ್ಲಿ ಮಳೆಯು ಬಡಜನರ ಮೇಲೆಬೀರುವ ಪರಿಣಾಮವನ್ನು ಗುರುತಿಸುವ ಪ್ರಯತ್ನ ಮಾಡಿದ್ದಾರೆ. ಅದು...

"ಬಿಟ್ಟ ಬಿರುಗಾಳಿಗೆ
ಹೊಯ್ದಾಡುತ ದಡವ
ಅರಸುವ ನಾವೆಯಂತೆ
ಒಕ್ಕೋರಲಿನ ಒಡನಾಟ
ಹಸಿವ ನೀರಡಿಕೆ ಹಿಂಗಿಸಿ
ತೊಡರಿನಿಂತ ಧಡಿಗೆ
ನಡುಕಿಗೆ ಕಂಬಳಿ ಹೊಂದಿಸಿ
ನಿಲ್ಲದ ಮಳೆ ಇಲ್ಲದ ಮಳೆ
ಯರಿಗೆ ಯಾರು"[೬]

ಮಳೆ ಬಂದ ಪರಿಣಾಮವನ್ನು ಬಡಜನರ ಮೇಲಾಗುವುದನ್ನು ಈ ರೀತಿಯಾಗಿ ಕಟ್ಟಿಕೊಟ್ಟಿದ್ದಾರೆ. ಬಡಜನರ ಜೀವನವು ಸದಾ ಸಂಕಷ್ಟದಲ್ಲಿರುತ್ತದೆ ಎಂಬುದನ್ನು ಬಿಟ್ಟ ಬಿರುಗಾಳಿಗೆ ಹೊಯ್ದಾಡುವ ಹೊಯ್ದಾಡುತ್ತಲೇ ದಡವನ್ನು ಸೇರ ಬಯಸುವ ನೌಕೆಯಂತೆ ಎಂದಿದ್ದಾರೆ. ಇಲ್ಲಿ ಬಿರುಗಾಳಿಗೆ ಸಿಕ್ಕಂತಹ ದೋಣಿಯನ್ನು ರೂಪಕವಾಗಿ ಬಳಸುವ ಮೂಲಕ ಬಡಜನರ ಜೀವನವು ಪ್ರತಿದಿನವು ಇಂತಹ ಮಾನಸಿಕ ತೊಳಲಾಟದಲ್ಲಿದೆ ಎಂದಿರುವರು. ಆದರೂ ಒಕ್ಕೊರಲಿನ ಒಡನಾಟ, ಹಸಿವು ನೀರಡಿಕೆ ಹಿಂಗಿಸಿ ತೊಡರಿ ನಿಂತ ಧಡಿಗೆ ನಡುಕಿಗೆ ಕಂಬಳ ಹೊಂದಿಸಿ ನಿಲ್ಲದ ಮಳೆ ಇಲ್ಲದ ಮನೆ ಯಾರಿಗೆ ಯಾರು? ಎಂದು ಓದುಗರನ್ನು ಪ್ರಶ್ನಿಸುತ್ತಾರೆ. ಬಡಜನರ ಜೀವನಸ್ಥಿತಿ ಹೇಗಿದೆ ಎಂದರೆ ಅವರಿಗೆ ತೊಡಲು ಸರಿಯಾದ ಬಟ್ಟೆಗಳಿಲ್ಲ ಚಳಿಯಿಂದ ರಕ್ಷಿಸುವ ಕಂಬಳಿಯಿಲ್ಲ ಎಲ್ಲಕ್ಕಿಂತ ಮಿಗಿಲಾಗಿ ಮನೆಯೇ ಇಲ್ಲ. ಮಳೆ ಹೇಗೆ ಬಡವರ ಜೀವನವನ್ನು ಸರ್ವನಾಶ ಮಾಡಿದೆ ಎಂಬುದನ್ನು ವಿವರಿಸಿದ್ದಾರೆ.

ಸಿ. ಪಿ. ಕೆ. ಅವರು ತಮ್ಮ 'ಮಳೆ' ಎಂಬ ಕವನಲ್ಲಿ ಮಳೆಯು ಬಡಜನರ ಮೇಲೆ ಉಂಟುಮಾಡಿರುವ ಪರಿಣಾಮವನ್ನು ವಿವರಿಸಿದ್ದಾರೆ. ಅದು...

"ಪಟ್ಟಣದಲ್ಲಿ ಬಿದ್ದು ನಾಗರೀಕರ ಶಾಪಕ್ಕೆ
ಪಕ್ಕಾಗುವ ಮಳೆ ಹಳ್ಳಿಯಲ್ಲಿ
ಹುಯ್ಯೋ ಹುಯ್ಯೋ ಮಳೆರಾಯ!
ಎಂದು ಹುಯ್ಯಲಿಟ್ಟರು ಬೀಳುವುದಿಲ್ಲ
ಒದ್ದೆಯಗುವುದಿಲ್ಲ ನೆಲ ಹೊಲ!"[೭]

ಮಳೆಯು ಪಟ್ಟಣಗಳಲ್ಲಿ ಬರುತ್ತದೆ ಅಲ್ಲಿ ಮಳೆಯ ಅವಶ್ಯಕತೆಯಿಲ್ಲ. ಜನಕ್ಕೆ ಮಳೆಯ ಬಗ್ಗೆ ಗೌರವಧಾರಗಳಾಗಲಿ ಪ್ರೀತಿಯಾಗಲಿ ಯಾವುದೊಂದು ಇಲ್ಲ. ಮಳೆಯನ್ನು ಶಪಿಸುತ್ತಾರೆ. ಮಳೆಯನ್ನು ಸಹ ಶಾಪಕ್ಕೀಡು ಮಾಡುತ್ತಾರೆ ಆದರೂ ಮಳೆ ಅಲ್ಲಿಯೇ ಬರುತ್ತದೆ. ಪಕ್ಕದ ಹಳ್ಳಿಯಲ್ಲಿ ಹುಯ್ಯೋ ಹುಯ್ಯೋ ಮಳೆರಾಯ ಎಂದು ಹುಯ್ಯಲಿಟ್ಟರೂ ಬೀಳುವುದಿಲ್ಲ. ಒದ್ದೆಯಾಗುವುದಿಲ್ಲ ನೆಲ ಹೊಲ ಅಂದರೆ ಮಳೆ ಅವಶ್ಯವಿದ್ದಲ್ಲಿ ಬರುವುದಿಲ್ಲ ಅದು ಬೇಡಿದರು ಬರುತ್ತಿಲ್ಲ. ಒದ್ದೆಯಾಗುತ್ತಿಲ್ಲ ನೆಲ ಹೊಲ ಈ ಮೂಲಕ ಹಳ್ಳಿಯ ಕೃಷಿ ಬದುಕಿಗೆ ಮಳೆ ಅವಶ್ಯಕವಾದದ್ದು ಆದರೆ ಮಳೆ ಹಳ್ಳಿಯಲ್ಲಿ ಬರುತ್ತಿಲ್ಲ ಅಲ್ಲಿನ ನೆಲವನ್ನು ತಣಿಸುತ್ತಿಲ್ಲ ಹೊಲಕ್ಕೂ ಮಳೆಯಿಲ್ಲ ಎಂದಿದ್ದಾರೆ.

ಮುಂದುವರಿದು...

"ಆಕಾಶದಲ್ಲಿ ಕವಿಯುತ್ತದೆ ಮೋಡಗಳ
ಕಪ್ಪು ಬರವಸೆ
ಆದರೆ ಬಹಳಕಾಲ ಕಾರ್ಯ ರೂಪಕ್ಕಿಳಿಯುವುದೇ ಇಲ್ಲ
ಬಿರು ಬಿಡುತ್ತದೆ ಎದೆಯಾಸೆ
ಸಾಲಕ್ಕೆ ಹೋದ ಮಳೆರಾಯ ಅದನ್ನೆಲ್ಲ ತಾನೇ ನುಂಗಿ
ನೀರು ಕುಡಿಯುತ್ತಾನೆ ಬಹುಪಾಲು
ನೀರಡಸುತ್ತದೆ ಮಣ್ಣೀನೋಡಲು!"[೮]

ಕಪ್ಪನೆಯ ಮೋಡವು ಮಳೆಯನ್ನು ತರುತ್ತದೆಂಬ ನಂಬಿಕೆಯಿಂದ ಜನ ಕಾಯುತ್ತಾರೆ. ಆದರೆ ಅದು ಕಪ್ಪು ಬರವಸೆಯಾಗಿಯೇ ಉಳಿಯುತ್ತದೆ. ಭರವಸೆಯಾಗಿಯೇ ಉಳಿದು ಬಹಳಷ್ಟು ದಿನ ಕಾರ್ಯ ರೂಪಕ್ಕಿಳಿಯುವುದಿಲ್ಲ. ಬಿರು ಬಿಡುತ್ತದೆ ಎದೆಯಾಸೆ ಮಳೆ ಬರುವ ಹೊತ್ತಿಗಾಗಲೇ ಮಳೆಯ ಮೇಲಿನ ಆಸೆಯೇ ನಶಿಸಿ ಹೋಗಿರುತ್ತದೆ. ಸಾಲಕ್ಕೆ ಹೋದ ಮಳೆರಾಯ ಅದನ್ನೆಲ್ಲ ತಾನೇ ನುಂಗುತ್ತಾನೆ. ನುಂಗಿ ನೀರು ಕುಡಿಯುತ್ತಾನೆ ನೀರಡಿಸುತ್ತದೆ ಮಣ್ಣಿನೊಡಲು ಎಂದರೆ ದಾಹದಿಂದ ಭೂಮಿ ಮಳೆಯ ನಿರೀಕ್ಷೆಯಲ್ಲಿರುತ್ತದೆ. ಆದರೆ ಮಳೆ ಬರುವುದಿಲ್ಲ ಬಡ ರೈತರು ಸಾಲವನ್ನು ಮಾಡಿ ಭೂಮಿಯನ್ನು ಹದಗೊಳಿಸಿ ಬಿತ್ತಿದರೆ ಮಳೆ ಸಮಯಕ್ಕೆ ಸರಿಯಾಗಿ ಬರುವುದಿಲ್ಲ. ಈ ಮಳೆಯು ರೈತನ ಸಾಲವನ್ನೆಲ್ಲ ತಾನೇ ನುಂಗಿ ನೀರು ಕುಡಿಯುತ್ತದೆ. ಅದು ಭೂಮಿಯ ದಾಹವನ್ನು ತೀರಿಸುವುದಿಲ್ಲ ಎಂದಿದ್ದಾರೆ.

ಮಳೆಯು ಬಡಜನರ ಮೇಲೆ ತುಂಬಾ ಕೆಟ್ಟ ಪರಿಣಾಮವನ್ನು ಬೀರಿದೆ. ಅದು ಬಡಜನರ ಜೀವನದೊಂದಿಗೆ ಆಟವಾಗಿದೆ. ಮಳೆಯು ತನ್ನನ್ನೆ ಆಶ್ರಯಿಸಿ ಕೃಷಿ ಮಾಡುತ್ತಿರುವ ಜನರನ್ನು ಅವರ ಬದುಕನ್ನು ಹಾಳು ಮಾಡಿದಂತಿದೆ. ಮಳೆಯು ಎರಡು ರೀತಿಯಲ್ಲಿ ಮನುಷ್ಯರಿಗೆ ಮತ್ತು ಎಲ್ಲ ಬಡಜನರಿಗೆ ಪರಿಣಾಮ ಬೀರುತ್ತದೆ. ಮಳೆ ಬಂದರೆ ಒಂದು ರೀತಿ ಸಂಕಷ್ಟವಾದರೆ ಮಳೆ ಬರದೆ ಇದ್ದರೆ ಇನ್ನೊಂದು ರೀತಿಯ ಸಂಕಷ್ಟ ಬರುತ್ತದೆ. ಮಳೆಯು ಸುರಿದು ಮನೆ ಇಲ್ಲದ ಜನರ ಜೀವನವನ್ನು ಅಸ್ತವ್ಯಸ್ಥಗೊಳಿಸುತ್ತದೆ. ಅಂತೆಯೇ ಮಳೆಯು ಬಡಜನರ ಜೀವನವನ್ನು ನಾಶಮಾಡುತ್ತದೆ ಮಳೆಯನ್ನ ನಂಬಿದ ಬಡ ರೈತರ

ಜೀವನದೊಂದಿಗೆ ಆಟವಾಡುತ್ತದೆ. ಸಮಯಕ್ಕೆ ಬಾರದ ಮಳೆ ಬೆಳೆಯನ್ನು ಹಾಳು ಮಾಡುತ್ತದೆ ಎಂಬುದನ್ನು ಕವಿಗಳು ಸ್ಪಷ್ಟವಾಗಿ ತೋರಿಸಿಕೊಟ್ಟಿದ್ದಾರೆ. ಮಳೆಯ ಈ ವ್ಯವಸ್ಥೆಗೆ ಮನುಷ್ಯನೆ ಕಾರಣನಾಗಿದ್ದಾನೆ ಮನುಷ್ಯ ಪರಿಸರವನ್ನು ಹಾಳು ಮಾಡಿದ್ದಾನೆ ಹಾಗಾಗಿ ಮಳೆಯು ಮನುಷ್ಯನನ್ನು ಹಾಳು ಮಾಡುತ್ತಿದೆ.

**ಕೊನೆಟಿ ಪ್ಪಣಿಗಳು**

೧. ಸಂಸ್ಕೃತಿ ಕಥನ :ನಾಗರಾಜ್ ಡಿ. ಆರ್. ಸಂಪಾದಕರು ಅಗ್ರಹಾರ ಕೃಷ್ಣಮೂರ್ತಿ, ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು, ೨೦೦೨ ಪುಟ ಸಂಖ್ಯೆ ೨೯

೨. ಕರ್ಣರಾಗ, ಡಾ. ಎಲ್. ಹನುಮಂತಯ್ಯ, ಪುಟ ಸಂಖ್ಯೆ ೧೮

೩. ಅದೇ ಪುಟ

೪. ಅದೇ ಪುಟ

೫. ಅದೇ ಪುಟ

೬. ರತ್ನದೀಪ, ಡಾ. ಎಸ್. ಬಸುಪಟ್ಟದ ಪುಟ ಸಂಖ್ಯೆ ೮೧

೭. ಶ್ರಾವಣದ ಸೆರಗು, ಲೀಲ ಕಲಕೋಟಿ, ಪುಟ ಸಂಖ್ಯೆ ೨೮

೮. ಸಿ. ಪಿ.ಕೆ. ಸಮಗ್ರ ಕಾವ್ಯ ಪುಟ ಸಂಖ್ಯೆ ೧೮೫

೯. ಅದೇ ಪುಟ

## ಅಧ್ಯಾಯ- ಎಂಟು

## ಮಳೆ ಬರುವಾಗಿನ ಸ್ಥಿತಿ

ಮಳೆಗೆ ಭಾರತೀಯ ಪರಂಪರೆಯಲ್ಲಿ ಒಂದು ವಿಶೇಷ ಗೌರವಸ್ಥಾನವಿದೆ. ಮಳೆಯನ್ನು ವರುಣದೇವನೆಂದು ಆರಾಧಿಸುತ್ತಾರೆ. ಮಳೆಯು ಮೂಲವಾಗಿ ಸಮುದ್ರದ ನೀರು ಆವಿಯಾಗಿ ಮೊಡಗಟ್ಟಿ ನೀರನ್ನು ಸುರಿಸುತ್ತದೆ. ಭೂಮಿಗೆ ಇದು ಪ್ರಕೃತಿಯ ಕೊಡುಗೆ ಮಳೆಯನ್ನು ಸಮೃದ್ಧಿಯ ಸಂಕೇತವೆಂದು ಭಾವಿಸಲಾಗಿದೆ. ಮಳೆಯನ್ನು ಕುರಿತು ನಾವು ಚಿಕ್ಕ ಮಕ್ಕಳಿದ್ದಾಗ ಶಾಲೆಯಲ್ಲಿ "ಹುಯೋ ಹುಯೋ ಮಳೆರಾಯ ಹೂವಿನ ತೋಟಕೆ ನೀರಿಲ್ಲ" ಎಂದು ಹೇಳಿದ ಹಾಡು ಇನ್ನು ನೆನಪಿನಲ್ಲಿ ಉಳಿದಿದೆ. ವರುಣನು ಭೂಮಿಗೆ ಸಮೃದ್ಧಿಯನ್ನು ತರಬಲ್ಲನು ಹಾಗೆಯೇ ಪ್ರಳಯದಿಂದ ಸರ್ವನಾಶ ಮಾಡಬಲ್ಲ ಶಕ್ತಿಯೊಂದಿದವನಾಗಿದ್ದಾನೆ. ವರುಣದೇವನಿಗೆ ವೈದಿಕ ದೇವರಲ್ಲಿ ಅಗ್ರಸ್ಥಾನವನ್ನು ನೀಡಿದ್ದರು. ಈತನ ಮನೆಯು ಸಹಸ್ರ ಬಾಗಿಲುಗಳಿಂದ ಕೂಡಿದೆ ಎಂದು ವರ್ಣಿಸಿದ್ದಾರೆ. ವರುಣನನ್ನು ನೆಲ ಮತ್ತು ಮುಗಿಲುಗಳ ನಿಯಂತ್ರಕ ಎಂದು ಕರೆಯುತ್ತಾರೆ. ಹೀಗೆ ವಿಶೇಷ ಮಾನ್ಯತೆಯನ್ನು ಪಡೆದ ಮಳೆಯನ್ನು ಜನರು ವಿಶೇಷ ಆಚರಣೆಗಳ ಮೂಕಲವೇ ಸ್ವಾಗತ ಬಯಸುತ್ತಾರೆ. ಮಳೆಯನ್ನು ದೇವರ ಕೃಪೆ ಎಂದು ತಿಳಿದಿರುವ ಮತ್ತು ಆರಾಧಿಸುವ ಜನರು ಸಾಕಷ್ಟಿದ್ದಾರೆ.

ಮಳೆಯು ಹೀಗೆ ದೈವತ್ವಕ್ಕೇರಿದ ಒಂದು ಮುಖವಾದರೆ ವಾಸ್ತವ ಸ್ಥಿತಿ ಬೇರೆಯೇ ಆಗಿದೆ. ಮಳೆಯು ಬರುವಾಗಿನ ಸ್ಥಿತಿಯನ್ನು ಜನರ ಜೀನವದ ಸ್ವರೂಪ ಸಂಬಂಧಗಳ ಸ್ವರೂಪ ಹಾಗೂ ವಾಸ್ತವದ ಸ್ವರೂಪದ ಸ್ಥಿತಿಗಳು ಹಿನ್ನೆಲೆಯಲ್ಲಿ ಅರ್ಥೈಸಲಾಗುತ್ತದೆ. ಅಂದರೆ ಮಳೆ ಬರುವಾಗ ಜನರು ತಮ್ಮ ಜೀವನದ ಮೇಲೆ ಉಂಟುಮಾಡುವ ಪರಿಣಾಮದ ಹಿನ್ನೆಲೆಯಲ್ಲಿ ನಿರ್ವಹಿಸಿಕೊಳ್ಳುವ ಮನಸ್ಥಿತಿಯಲ್ಲಿದ್ದಾರೆ. ಅಂತೆಯೇ ಸಂಬಂಧಗಳನ್ನು ಬೆಸೆಯುವ ಮಳೆಯು ಅದನ್ನು ಉಳಿಸುವ ಅದರ ಮನಸ್ಥಿತಿಯ ಮೇಲೆ ಪರಿಣಾಮ ಬೀರುತ್ತದೆ. ಮಳೆಯು ಜನರ ವಾಸ್ತವ ಜೀವನದ ಮೇಲೆ ಬೀರುವ ಪರಿಣಾಮದ ಹಿನ್ನೆಲೆಯಲ್ಲಿ ಮಳೆ ಬರುವಾಗಿನ ಸ್ಥಿತಿಯನ್ನು ನಿರ್ವಚಿಸಿಕೊಳ್ಳುವ ಅಗತ್ಯವಿದೆ. ಹೀಗೆ ಮಳೆಯು ಭಿನ್ನ ಭಿನ್ನ ಆಯಾಮಗಳಲ್ಲಿ ವಿವರಣೆ ಪಡೆಯುವ ಮತ್ತು ಜನರ ಜೀವನ ಪ್ರಭಾವಿಸುವುದರ ನೆಲೆಯಲ್ಲಿ ಮಳೆಯ ಬರುವಿಕೆಯ ಸ್ಥಿತಿಯನ್ನು ವಿವರಿಸಿಕೊಳ್ಳಬೇಕಾಗುತ್ತದೆ.

ಜನರ ಜೀವನವು ಹೇಗೆ ಭಿನ್ನ ಭಿನ್ನವಾಗಿದೆಯೋ ಹಾಗೆಯೇ ಮಳೆಯು ಬರುವಾಗ ಸ್ಥಿತಿಯು ಅವರ ಜೀವನದ ಮೇಲೆ ಭಿನ್ನ ಸ್ಥಿತಿಯಲ್ಲಿನ ಪರಿಣಾಮ ಬೀರುತ್ತದೆ. ಮಳೆಯು ತನ್ನದೇ ಆದ ಭಿನ್ನ ಪರಿಸರದ ಸ್ಥಿತಿಯನ್ನು ಹೊಂದಿದೆ. ಬೇರೆ ಬೇರೆ ಪರಿಸರಗಳಲ್ಲಿ ಬೇರೆ ಬೇರೆ ಸ್ಥಿತಿಯಲ್ಲಿದ್ದು ಅದು ಭಿನ್ನವಾಗಿ ತೋರುತ್ತದೆ. ಮಳೆಯು ಬರುವಾಗಿನ ಸ್ಥಿತಿಯ ಮೇಲೆ ಗಾಳಿಯ ಒತ್ತಡ ವಾತಾವರಣ ಮೋಡ ಎಲ್ಲವು ಪರಿಣಾಮ ಬೀರುತ್ತವೆ. ಮಳೆಯನ್ನು ಪ್ರಭಾವಿಸುವ ಪರಿಸರದ ಸ್ಥಿತಿಯೂ ಮಳೆ ಬಂದ ಪರಿಣಾಮದ ಮೇಲೆ ಅಥವಾ ಮಳೆ ಬರುವ ಸಂದರ್ಭದಲ್ಲಿ ಭಿನ್ನ ರೂಪವನ್ನು ಪಡೆಯುತ್ತದೆ.

ಹೀಗೆ ವಿಭಿನ್ನ ಸ್ವರೂಪ ಹೊಂದಿರುವ ಮಳೆ ಬರುವಾಗಿನ ಸ್ಥಿತಿಯನ್ನು ಕಾದು ಕುಳಿತಿರುವ ರೈತರು, ಭೂಮಿ, ಪರಿಸರದ ಜೀವ ಜಗತ್ತುಗಳೆಲ್ಲವು ಬೇರೆಯದೇ ಸ್ವರೂಪ ಪಡೆದಿರುತ್ತವೆ. ಮಳೆ ಬಂದ ನಂತರ ಬದಲಾಗುತ್ತದೆ. ಮಳೆಯು ಒಟ್ಟು ಪರಿಸರದ ಸ್ಥಿತಿಯ ಮೇಲೆ ಮತ್ತು ಜನರ ಜೀವನದ ಮೇಲೆ ಭಿನ್ನ ರೂಪದಲ್ಲಿ ಪ್ರಭಾವಿಸಿದೆ. ಮತ್ತು ಮಳೆ ಬರುವಾಗ ಮನಸ್ಸುಗಳ ಸ್ಥಿತಿಯು ಸಹ ಭಿನ್ನವಾಗಿರುತ್ತದೆ. ಮನಸ್ಸಿನ ಸ್ಥಿತಿಯ ಮೇಲೆ ಮಳೆ ಬರುವಾಗಿನ ಸ್ಥಿತಿಯ ಪರಿಣಾಮ ಬೇರೆಯದೇ ಆಯಾಮವನ್ನು ಪಡೆಯುತ್ತದೆ.

ಕವಿಗಳು ಮಳೆ ಬರುವಾಗಿನ ಸ್ಥಿತಿಯನ್ನು ಕುರಿತು ಹೇಗೆ ಅರ್ಥೈಸಿಕೊಳ್ಳುವ ಪ್ರಯತ್ನ ಮಾಡಿದ್ದಾರೆಂಬುದನ್ನು ನೋಡುವ. ಗುಲ್ಜಾರರ ರೈನ್ ಕವಿತೆಯನ್ನು ಕನ್ನಡಕ್ಕೆ ಗುರುಮೂರ್ತಿ ಪೆಂಡಕೂರು ಅವರು ಅನುವಾದಿಸಿದ್ದಾರೆ. ಗುಲ್ಜಾರರು ಮಳೆ ಬರುವಾಗಿನ ಸ್ಥಿತಿಯನ್ನು ಕುರಿತು ಹೀಗೆ ವರ್ಣಿಸಿದ್ದಾರೆ...

“ಮಳೆ ಬಂದಾಗ
ನೀರಿಗೆ ಕಾಲು ಬರುತ್ತವೆ
ನೀರು ಬೀದಿಯಲ್ಲಿ ಕುಣಿದು ಕುಪ್ಪಳಿಸಿ
ಆಟದಲಿ ಗೆದ್ದ
ಹುಡುಗರಂತೆ
ಗೋಡೆಗಳನೊಡೆಯುತ್ತದೆ”[೧]

ಮಳೆಬರುವಾಗಿನ ಸ್ಥಿತಿಯ ಹಿನ್ನೆಲೆಯಲ್ಲಿ ಗುಲ್ಜಾರ್ ಅವರು ಒಂದು ಅನುಭವವನ್ನು ಕಟ್ಟಿಕೊಟ್ಟಿದ್ದಾರೆ. ಮಳೆ ಬಂದಂತಹ ಸಂದರ್ಭದಲ್ಲಿ ನೀರಿಗೆ ಕಾಲು ಬರುತ್ತವೆ. ನೀರು ಎಲ್ಲೆಡೆಯು ಹರಿಯುತ್ತಿರುತ್ತದೆ. ನೀರು ಬೀದಿಯಲ್ಲಿ ಕುಣಿದು ಕುಪ್ಪಳಿಸುತ್ತದೆ. ಹೇಗೆಂದರೆ ಆಟದಲ್ಲಿ ಗೆದ್ದ ಹುಡುಗರಂತೆ ಎಂದಿದ್ದಾರೆ. ಅಂದರೆ ನೀರಿಗೆ ಚೈತನ್ಯ ಬರುವುದು ಮಳೆಬಂದಾಗ ಅದು ನೀರಿಗೂ ಶಕ್ತಿಯನ್ನು ತಂದು ಕೊಡುತ್ತದೆ. ಈ ನೀರು ಗೋಡೆಗಳನೊದೆಯುತ್ತದೆ. ಎಂದಿದ್ದಾರೆ, ಮುಂದುವರೆದು...

“ಆಟಗಳಲ್ಲಿ ಗೆದ್ದ
ಈ ಬೀದಿಯ ಹುಡುಗರು
ಕ್ಯಾನ್‌ವಾಸ್ ಬೂಟಿನಲ್ಲಿ
ಚೆಂಡಿನಂತೆ ಪುಟಿಯುವುದು
ಮಳೆ ಬಂದಾಗ
ನೀರು ಬೀದಿಯಲ್ಲಿ ಕುಣಿಯುವುದು ಕುಪ್ಪಳಿಸಿ
ಗೋಡೆಗಳ ನೊದೆಯುವಂತೆ
ಪುಟಿಯುವುದು
ಮಳೆ ಬಂದಾಗ”[೨]

ಅಂದರೆ ಮಳೆಯು ಬಂದಾಗ ಆಗುವ ಸಂತೋಷವನ್ನು ಆಟದಲ್ಲಿ ಗೆದ್ದು ಬಂದ ಹುಡುಗರ ಗುಂಪಿಗೆ ಹೋಲಿಸಲಾಗಿದೆ. ಒಂದು ಗುಂಪಿನ ವಿರುದ್ಧ ಗೆದ್ದ ಸಂತೋಷಕ್ಕೆ ಪಾರವೇ ಇಲ್ಲ, ಅಂತೆಯೇ ಮಳೆಬರುವಾಗ ಜನರ ಸಂತೋಷಕ್ಕೆ ಪಾರವೇ ಇಲ್ಲ. ಮಳೆಬರುವಾಗ ನೀರು ಬೀದಿಯಲ್ಲೆಲ್ಲ ಕುಣಿದು ಕುಪ್ಪಳಿಸಿ ಹಾಡುವುದು ಗೋಡೆಗಳನ್ನು ಒದೆಯುವುದು ಪುಟಿಯುವುದು ಮಳೆಬಂದಾಗ.

ಲೀಲಾ ಕಲಕೋಟೆಯವರು ತಮ್ಮ ‘ಶ್ರಾವಣದ ಸೆರಗು’ ಕವನ ಸಂಕಲನದ ಮಳೆ ಕವನದಲ್ಲಿ ಮಳೆ ಬಂದ ಪರಿಣಾಮ ಮಳೆ ಬರುವಾಗಿನ ಸ್ಥಿತಿಯನ್ನು ಕುರಿತು ಬರೆದಿದ್ದಾರೆ. ಅದು ಹೀಗಿದೆ...

“ಎಂದಿನಂತಿಲ್ಲದೀ ಮಳೆ
ಮಳೆಯಾಗುಳಿದಿಲ್ಲ
ಮನ ಮನೆಗಳ ನಡುಗಿಸಿ
ಭಯಾನಕ ಚಿತ್ರಗಳ
ಬಿಡಿಸಿಡ ತೊಡಗಿವೆ
ಎಲ್ಲಿ ಕಣ್ಣು ಹಾಯಿಸಿದರೂ
ನೀರೆ ನೀರು

ಮನೆ, ಜನ, ಗಿಡ, ಕಟ್ಟಡ
ಪ್ರಾಣಿ, ಪಕ್ಷಿ ಸಂಕುಲ
ವಾಹನಗಳೆಲ್ಲ ನೀರಲ್ಲಿ ತೇಲುವ
ಮೀನುಗಳಾಗಿ
ಚಟಪಟ ಲಟ ಪಟ'[೩]

ಮಳೆ ಬರುವಾಗಿನ ಸ್ಥಿತಿಯನ್ನು ಕುರಿತು ಲೀಲಾ ಕಲಕೋಟೆಯವರ ಅಭಿಪ್ರಾಯ ಈ ಮೇಲಿನಂತಿದೆ. ಎಂದಿನಂತಿಲ್ಲ. ಈ ಮಳೆ ಮಳೆಯಾಗುಳಿದಿಲ್ಲ. ಮಳೆಯು ಪ್ರತಿದಿನದ ಮಳೆಯಂತಿಲ್ಲ. ಕೇವಲ ಮಳೆಯಾಗಿ ಉಳಿದಿಲ್ಲ. ಈ ಮಳೆಯ ಮನಸ್ಸುಗಳನ್ನು ನಡುಗಿಸಿ ಮನೆಗಳನ್ನು ನಡುಗಿಸಿ ಭಯಾನಕ ಚಿತ್ರಗಳನ್ನು ಬಿಡಿಸುತ್ತಿದೆ. ಭಯಂಕರ ರೂಪದಲ್ಲಿ ಮಳೆ ಬರುತ್ತಿದ್ದು ಅದು ಜನರ ಜೀವನದ ಮೇಲೆ ಭೀಕರ ಪರಿಣಾಮವನ್ನು ಬೀರುತ್ತಿದೆ. ಎಲ್ಲಿ ಕಣ್ಣು ಹಾಯಿಸಿದರು ನೀರಿನಿಂದ ತುಂಬಿಕೊಂಡಿದೆ. ಮಳೆಯು ಎಲ್ಲವನ್ನು ನಾಶ ಮಾಡುವಂತೆ ಬಂದಿದ್ದು ಮನೆಗಳ ತುಂಬೆಲ್ಲ ನೀರು ತುಂಬಿದೆ. ಜನ ಗಿಡಕಟ್ಟಡ ಪ್ರಾಣಿ ಪಕ್ಷಿ ಸಂಕುಲವೆಲ್ಲ ನೀರಿನಿಂದ ಆಘಾತಗೊಂಡಿದೆ. ವಾಹನಗಳೆಲ್ಲ ನೀರಲ್ಲಿ ತೇಲುವ ಮೀನುಗಳಂತೆ ಕಾಣುತ್ತದೆ. ಮಳೆ ಬರುವಾಗಿನ ಭಯಂಕರ ಸ್ಥಿತಿಯನ್ನು ನಾವಿಲ್ಲಿ ಕಾಣಬಹುದು. ಈ ಕವಿತೆಯಲ್ಲಿ ಲೇಖಕರ ಮಳೆ ಬರುವ ಸಂದರ್ಭದ ಚಿತ್ರಣ ನೀಡಿದ್ದಾರೆ. ಇಲ್ಲಿ ಮಳೆ ಬರುವಾಗ ಮನುಷ್ಯನ ಜೀವನಕ್ಕೆ ಮಾತ್ರವಲ್ಲದೆ ಪ್ರಾಣಿ ಪಕ್ಷಿಗಳ ಜೀವನದ ಮೇಲೆಯು ಹೇಗೆ ನಕರಾತ್ಮಕ ಪರಿಣಾಮವನ್ನು ಮಳೆ ಬೀರುತ್ತದೆಂಬುದನ್ನು ನಾವು ಕಾಣಬಹುದಾಗಿದೆ.

ಗಂಗಾಧರ ಚಿತ್ತಾಲರು ತಮ್ಮ ಎಪ್ಪತ್ತೆರಡು ಕವಿತೆಗಳು ಕವನ ಸಂಕಲನದಲ್ಲಿನ ವರುಣ ಎಂಬ ಕವನದಲ್ಲಿ ಮಳೆ ಬರುವಾಗಿನ ಸ್ಥಿತಿಯನ್ನು ಕುರಿತು ಈ ರೀತಿ ಬರೆದಿದ್ದಾರೆ.

"ಯಾವ ಕೃತಯುಗದ ಹತ ಜೀವಿಗಳಿವರು
ಈ ಮೌನಿಗಳು ಶಿಲಾದೇಹಿಗಳು?
ಕ್ಷಾರೋದಧಯ ತೀರದಲ್ಲಿ
ಯಾವ ನಿರಂತರ ಚಿಂತನೆಯಿಂದ ಅರ್ಘ್ಯೋಪಾಸನೆಯಿದು
ಯಾವ ತಪ ಯಾವ ಉಶ್ಯಾಪ
ಪುರಾತನ ಸನಾತನ ಸನ್ನಿದಿಯಲ್ಲಿ ನಿಂತು
ದಿಗಂತ ವಿಶ್ರಾಂತನಾದ
ವರುಣನ ವೈಭವವನ್ನು ನೋಡು ಜೀವವೇ"[೪]

ಯಾವ ಹಳೆಯ ಕಾಲದ ಪ್ರಾಚೀನ ಕಾಲದ ಸತ್ತಂತಹ ಜೀವಿಗಳಿವರು, ಇವರು ಮೌನಿಗಳು ಶಿಲಾದೇಹಿಗಳು ಎನ್ನುತ್ತಾರೆ. ಅಂದರೆ ಸಮುದ್ರದ ದಂಡೆಯ ಬಳಿಯಿರುವ ಬಂಡೆಗಲ್ಲುಗಳನ್ನು ಕಂಡು ಹೇಳುತ್ತಿದ್ದಾರೆ. ಈ ಬಂಡೆಗಲ್ಲುಗಳಿಗೆ ಎಲ್ಲಾ ಸ್ಥಿತಿಯು ಒಂದೆ ಮಳೆ ಬಂದರು ಬರದಿದ್ದರು ಈ ಬಂಡೆಗಳು ಹತ ಜೀವಿಗಳಂತೆ ಮಲಗಿರುತ್ತವೆ ಎಂದಿದ್ದಾರೆ. ಕ್ಷಾರೋಧಯ ತೀರದಲ್ಲಿ ಅಂದರೆ ಕೊಳಕು ತೀರದಲ್ಲಿ ಯಾರಿಗೆ ಅರ್ಪಿಸಬೇಕು ಯಾವ ತಪಸ್ಸಿದು ಯಾವ ಉಶ್ಯಾಪ ಅಂದರೆ ಯಾವ ತಪಸ್ಸೊ ಅಥವಾ ಯಾರಿಂದಲೋ ಪಡೆದ ಶಾಪವೋ ನಿಮಗೆ ಎಂದು ಕೇಳುತ್ತಾರೆ. ಈ ಪುರಾತನ ವಾದಂತಹ ಹಳೆಯದಾದಂತಹ ಸನ್ನಿಧಿಯಲ್ಲಿ ನಿಂತು ದಿಂಗತವಾದಂತ ಮಳೆಯ ವೈಭವವನ್ನು ನೋಡು ಜೀವವೇ ಎಂದಿದ್ದಾರೆ. ಅಂದರೆ ಈ ಬಂಡೆಗಳಿಗೆ ಮಳೆ ಬರುವುದು ಸಾಮಾನ್ಯವಾದದ್ದು. ಕವಿಗೆ ಅದು ವೈಭವದ ನೋಟವಾಗಿದೆ. ಅದನ್ನು ಅವರ ಜೀವಕ್ಕೆ ಉಲ್ಲಾಸವನ್ನು ಆನಂದವನ್ನು ನೀಡುತ್ತದೆ. ಇದು ಅತ್ಯಂತ ಹಳೆಯ ಸ್ಥಳ ಈ ಜಾಗದಲ್ಲಿ ನಿಂತು ಮಳೆಯನ್ನು ನೋಡುವುದು ಪುಣ್ಯವೇ ಸರಿ ಎಂದಿದ್ದಾರೆ.

ಮುಂದುವರೆದು...

“ಕಾಲನಂತೆ ಪ್ರಾಚೀನನಾದರೂ ತ್ರಿಕಾಲ ಬಾಧಿತನಿವ
ನವೋನವನೀವ ಅರ್ವಾಚೀನನಿವ ಅನಿರ್ವಚನೀಯನಿವ
ತನ್ನ ಬೆಳ್ಳಿ ಮಕ್ಕಳನ್ನೆಲ್ಲ
ಭೂತೀರಗಳಲ್ಲಿ ಕುಣಿಯಲು ಬಿಟ್ಟು
ಜಲಪರ್ವದಲ್ಲಿ ತೊಡಗಿಹನು ವೀಚಿಲೋಲ”[೫]

ಮಳೆ ಬರುವ ಸಂದರ್ಭದ ಸ್ಥಿತಿಯಲ್ಲಿ ಮಳೆಯನ್ನು ಕವಿ ಕಾಲದಂತೆ ಪ್ರಾಚೀನನಾದರೂ ಮೂರು ಕಾಲಗಳನ್ನು ಬಾಧಿಸಿದವನು. ಇವನು ಅಂದರೆ ದ್ವಾಪರ ಯುಗ, ತೇತ್ರಾ ಯುಗ, ಕಲಿ ಯುಗಗಳನ್ನು ಬಾಧಿಸಿದಂತಹವನು. ಈ ಮಳೆರಾಯ ಅಷ್ಟು ಹಳೆಯ ಕಾಲದವನಾದರು ಪ್ರತಿ ಬಾರಿಯೂ ನವೋನವನೀತನಾಗಿರುತ್ತಾನೆ. ಪ್ರತಿ ಬಾರಿಯಲ್ಲೂ ಹೊಸತನವನ್ನು ತರುತ್ತಾನೆ. ಅದು ಅರ್ವಾಚೀನವಾದುದು ಎಂದಿದ್ದಾರೆ. ಮುಂದುವರೆದು ಅರ್ವಚನೀಯವಾದುದ್ದು ಎಂದಿದ್ದಾರೆ. ಮಳೆ ತನ್ನ ಬೆಳ್ಳಿ ಮಕ್ಕಳನ್ನೆಲ್ಲ ಭೂಮಿಯಲ್ಲಿ ಕುಣಿಯಲು ಬಿಟ್ಟಿದೆಯೇನೋ ಎಂಬಂತೆ ಮಳೆ ಬರುತ್ತಿದೆ ಎನ್ನುತ್ತಾ ಮಳೆಯು ಜಲ ಪರ್ವದ ರೀತಿಯಲ್ಲಿ ಅಲೆಗಳನ್ನು ಸೃಷ್ಟಿಸುತ್ತಿದೆ ಎಂದಿದ್ದಾರೆ. ಮುಂದುವರೆದು...

“ಯೋಜನೆಗಳ ವಿಸ್ತಾರದಲ್ಲಿ ತೆಂಕಾಡುತ್ತಿದೆ ಜಲ ಸಂಮೃದ್ಧಿ
ದಿಜ್ಞಾಂಡಲವನ್ನೆಲ್ಲ ತುಂಬಿದೆ ಉದ್ಘೋಷ
ಶಿವನ ಹಾಸದಂತೆ ಹಬ್ಬಿದೆ ಶುಭ್ರಹಾಸ
ಇವನ ಮೊಳಗಿನಲ್ಲಿಯೂ ಮೌನದ ಮಹಾಧ್ವನಿಯಿದೆ
ಪ್ರಕ್ಷುಬ್ಧತೆಯಲ್ಲಿಯೂ ಶಾಂತಿಯ ನಿಸ್ತಬ್ಧತೆಯಿದೆ
ದೋರ್ದಂಡ ಬಲದಲ್ಲಿಯೂ ಸಂಯಮದ ನಿಯಮವಿದೆ”[೬]

ಮಳೆಯನ್ನು ಕುರಿತಂತೆ ಮಳೆಯ ನೀರನ್ನು ರಕ್ಷಿಸುವ ಯೋಜನೆಗಳು ಎಲ್ಲಾಕಡೆಯಲ್ಲಿಯೂ ಹಬ್ಬಿವೆ. ಭೂಮಿಯ ತುಂಬೆಲ್ಲ ಹೊಸ ಜಲಸಮೃದ್ಧಿ ಯೋಜನೆಗಳು ಅನುಷ್ಠಾನಗೊಳ್ಳುತ್ತಿವೆ. ಈ ಘೋಷವು ಭೂಮಿಯ ತುಂಬೆಲ್ಲಾ ಹರಡಿದೆ. ಶಿವನ ಹಗ್ಗದಂತೆ ಎಲ್ಲಕಡೆಯು ಹರಡಿದೆ. ಈ ಬಿಳಿಯಾದ ಹಾಸ ಶಿವನ ಮೊಳಗಿನಂತೆ ಮಳೆಯ ಮೊಳಗಿನಲ್ಲಿಯೂ ಮೌನದ ಮಹಾಧ್ವನಿಯಿದೆ. ಪ್ರಕ್ಷುಬ್ದತೆಯಲ್ಲಿಯೂ ಶಾಂತಿಯ ಸ್ತಬ್ದತೆಯಿದೆ. ಮಳೆ ಬರುವಾಗ ಬಯದ ವಾತಾವರಣ ಸೃಷ್ಠಿಸಿದರೂ ಸಹ ಅದರಲ್ಲಿಯು ನಿಶ್ಯಬ್ದದ ಮಹಾ ಧ್ವನಿಯೇ ಅಡಗಿದೆ. ದೋರ್ಥಂಡ ಬಲದಲ್ಲಿಯು ಸಂಯಮದ ನಿಯಮ ಏದೆ. ಎಂದರೆ ಹೊಸನೀರು ಬರುವಾಗ ಹಳೆನೀರು ಹೋಗಬೇಕೆಂದಿದ್ದಾರೆ. ಇಲ್ಲಿ ಹೊಸತನದ ನಿರೀಕ್ಷೆ ಇರುವುದನ್ನು ನಾವು ಕಾಣಬಹುದು. ಹೀಗೆ ಮಳೆಯು ಶಿವನ ಸ್ವರೂಪಿಯಾದದ್ದು, ಶಿವ ಹೇಗೆ ಭೂಮಿಯಲ್ಲಿ ಸಮಾನತೆ ಕಾಯಲು ಜೀವಿಗಳ ಅಂತ್ಯ ಕೈಗೊಳ್ಳುವನೋ ಹಾಗೆಯೇ ಮಳೆಯೂ ಹೊಸತನವನ್ನು ತರುತ್ತದೆ ಎಂದಿದ್ದಾರೆ.

ಗಂಗಾಧರ ಚಿತ್ತಾಲರು ಪ್ರತಿಮೆಗಳ ಮೂಲಕವೇ ಮಳೆ ಬರುವಾಗಿನ ಸ್ಥಿತಿಯನ್ನು ಕುರಿತು ವಿವರಿಸಿದ್ದಾರೆ. ಮಳೆ ಬರುವುದು ಹೊಸತನವನ್ನು ಭೂಮಿಗೆ ತರುತ್ತದೆ. ತನ್ನ ಮಕ್ಕಳಂತಹ ಹನಿಗಳನ್ನು ಎಲ್ಲೆಡೆಯೂ ಹರಡುವಂತೆ ಮಾಡಿದೆ ಎಂದಿದ್ದಾರೆ.

ಸು. ರಂ. ಎಕ್ಕುಂಡಿಯವರು ತಮ್ಮ 'ಬೆಳಕ್ಕಿ ಹಿಂಡು' ಕವನ ಸಂಕಲನದಲ್ಲಿ 'ಮಳೆಯಲ್ಲೊಂದು ಕತೆ' ಎಂಬ ಕವನದಲ್ಲಿ ಮಳೆ ಬರುವಾಗಿನ ಸ್ಥಿತಿಯನ್ನು ಕುರಿತು ಈ ರೀತಿಯಾಗಿ ಹೇಳಿದ್ದಾರೆ...

“ಅದೇಕೋ ಕಾಲಪುರುಷನಿಗೆ ಗುಣವಿದ್ದಿಲ್ಲ
ಕುಡಿದರೂ ಜೀರಿಗೆ ಕಷಾಯ ಮದ್ದು

ಮುಗಿಲು ಕಪ್ಪಿಟ್ಟು ಅರೆಗತ್ತಲೆಯು ಕವಿ
ದಿತ್ತಿ. ಗುಡಗಾಟ ಸಿಡಿಲು, ಮಿಂಚುಗಳ ಸದ್ದು"[೭]

ಕವಿ ಮಳೆ ಬರುವಾಗಿನ ಸ್ಥಿತಿಯನ್ನು ಚಿತ್ರಿಸುತ್ತ ಕಾಲ ಪುರುಷನನ್ನೆ ದೂರುತ್ತಾರೆ. ಮಳೆ ಬರುವ ವಾತಾವರಣವಿದ್ದಾಗ ಮಳೆಯನ್ನು ತರುವ ಕಾಲ ಪುರುಷನಿಗೆ ಬುದ್ದಿ ಇರಲಿಕ್ಕಿಲ್ಲ. ಕುಡಿದರೂ ಜೀರಿಗೆಯ ಕಶಾಯ ಮದ್ದು, ಮುಗಿಲು ಕಪ್ಪಿಟ್ಟಿತು. ಅರೆಗತ್ತಲೆಯು ಕವಿದಿತ್ತು. ಮಳೆ ಬರುವ ಸಂದರ್ಭದಲ್ಲಿ ಮೋಡದ ಸ್ಥಿತಿ ಮತ್ತು ವಾತಾವರಣದ ಸ್ಥಿತಿಯನ್ನು ಕವಿ ಈ ರೀತಿ ಹೇಳಿದ್ದಾನೆ. ಮುಂದುವರೆದು ಎಲ್ಲ ಕಡೆಯಲ್ಲು ಗುಡುಗಾಟ ಸಿಡಿಲು ಮಿಂಚುಗಳ ಸದ್ದು ಹರಡಿದೆ ಎಂದಿದ್ದಾರೆ. ಮುಂದುವರೆದು

"ಗಾಳಿಯಲಿ ಬಾಳೆ ಹೊಯ್ದಾಡಿದವು ಬಾಗಿದವು
ತಾಗಿದವು, ತೂಗಿದವು ಒಂದಕ್ಕೊಂದು
ಅಡಕೆಗಳು ತೆಂಗುಗಳು: ಕಿಟಕಿಯೊಳು
ಆಗೀಗ ಮನೋರಮೆ ಇಣುಕಿದಳು ಪತಿಗೆಂದು"[೮]

ಮಳೆ ಬರುತ್ತಿರುವ ಸಂದರ್ಭದಲ್ಲಿ ಗಾಳಿಯಿಂದಾಗಿ ಬಾಳೆಯ ಗಿಡಗಳೆಲ್ಲ ಹೊಯ್ದಾಡಿದವು, ಬಾಗಿದವು ತಾಳಿದವು, ಎಂದರೆ ಕೆಲವು ಮುರಿದು ನೆಲಕ್ಕೆ ಬಿದ್ದವು, ಹಾಳಾದವು ತೂಗಿದವು. ಒಂದಕ್ಕೊಂದು ಗಾಳಿಯಿಂದಾಗಿ ಹೊಯ್ದಾಡಿದವು. ಅಡಿಕೆ ತೆಂಗಿನ ಮರಗಳೆಲ್ಲವು ತೂಗಾಡಿದವು. ಮಳೆ ಬರುವಾಗ ರೈತನ ಬೆಳೆಯ ಮೇಲೆ ಬೀರುವ ಪರಿಣಾಮ ಮತ್ತು ಮಳೆ ಬರುವಾಗ ಸ್ಥಿತಿಯನ್ನು ಸ್ಪಷ್ಟವಾಗಿ ಇಲ್ಲಿ ಗುರುತಿಸಬಹುದು. ಮತ್ತು ಮನೋರಮೆಯು ತನ್ನ ಪತಿಗಾಗಿ ಕಿಡಕಿಯಲ್ಲಿ ಬಂದು ಇಣಕಿದಳು. ಮನೆಗಳಲ್ಲಿ ಗಂಡನಿಗಾಗಿ ಕಾದ ಪತ್ನಿಯ ರೂಪ ಇಲ್ಲಿರುವುದನ್ನು ನಾವು ಗುರುತಿಸಬಹುದು.

ಹೀಗೆ ಮಳೆ ಬರುವಾಗ ಪ್ರಕೃತಿಯಲ್ಲಿಯ ಸ್ಥಿತಿಯಲ್ಲಿ ರೈತನ ಬೆಳೆಯ ಸ್ಥಿತಿ ಮಳೆಬರುವಾಗ ತನ್ನವರಿಗಾಗಿ ಕಾಯುವ ಮನೆಯವರ ಸ್ಥಿತಿಗಳು ಮತ್ತು ಗುಡುಗು ಮಿಂಚುಗಳ ಆರ್ಭಟಗಳೆಲ್ಲವನ್ನು ವಿವರಿಸುವ ಪ್ರಯತ್ನ ಮಾಡಿದ್ದಾರೆ. ಒಟ್ಟಾರೆಯಾಗಿ ಮಳೆ ಬರುವಾಗಿನ ಸ್ಥಿತಿಯನ್ನು ಕುರಿತು ವಿಭಿನ್ನ ಆಯಾಮಗಳ ಮೂಲಕ ಕಟ್ಟಿಕೊಡಲು ಪ್ರಯತ್ನ ಮಾಡಿದ್ದಾರೆ.

ವಿ. ಕೃ. ಗೋಕಾಕ್ ಅವರು ಆಣಿಕಲ್ಲು ಎಂಬ ಕವನದಲ್ಲಿ ಮಳೆ ಬರುವಾಗಿನ ಸ್ಥಿತಿಯನ್ನು ಚಿತ್ರಿಸುವ ಪ್ರಯತ್ನ ಮಡಿದ್ದಾರೆ. ಅದು...

"ನೇರಲ ಬಣ್ಣದ ಮಳೆಮೋಡ
ಮುಂಗಾರಿನ ಮುಗಿಲಲಿ ನೋಡ
ವರ್ಷಾಂಗನೆ ಹಾರಿಸಿದಳೇ ಹುಬ್ಬು!
ವನ ಸಳೆ ಮಿಂಚಿನ ನೋಟ
ಬೀಸಗತಿಗಳ ಹೊಳೆದಾಟ
ಎಲ್ಲೆಡೆಗೂ ಮೊಳಗಿನ ಹಿರಿನಾದ
ಕಾಳಗ ಕೊಳಗುಗಳ ಉನ್ಮಾದ!
ಆವ ಮಹಾಯುದ್ದದ ಹೊಸ ಹೊಂಚು?
ಸುದ್ದಿ ಯಾವುದೆನು ಬೀರಿದೆ ಮಿಂಚು?"[೯]

ಮಳೆ ಬರುವ ಸಂದರ್ಭದಲ್ಲಿ ಮೋಡ ಮತ್ತು ಮಳೆಯ ಸ್ಥಿತಿಯನ್ನು ಕುರಿತಂತೆ ಗೋಕಾಕ್ ಅವರು ತಿಳಿಸುವ ಪ್ರಯತ್ನ ಮಾಡಿದ್ದಾರೆ. ಅವರು ಮೋಡವನ್ನು ಕುರಿತು ಮಳೆ ಬರುವ ಸಂದರ್ಭದಲ್ಲಿ ಮೋಡ ನೇರಲ ಬಣ್ಣದಲ್ಲಿರುತ್ತದೆ. ಮುಂಗಾರಿನ ಮುಗಿಲು ನೋಡಲು ಆಕರ್ಷಕವಾಗಿರುತ್ತದೆ. ವರ್ಷಾನೆಯ

ಹಾಸಿದಹುಬ್ಬ ಎಂದರೆ ಮಳೆಯು ಹುಬ್ಬನ್ನು ಹಾರಿಸಿದೆ ಎನ್ನುವ ಹೊಸ ರೂಪಕವನ್ನು ಬಳಸುತ್ತಾರೆ. ವನಸೆಳೆ ಮಿಂಚಿನ ನೋಟ ಈ ಮಳೆ ಬರುತ್ತಿರುವ ಸ್ಥಿತಿಯ ನೋಡಲು ತುಂಬ ಆಕರ್ಷಣೀಯವಾಗಿದೆ. ಬೀಸಗತಿಗಳ ಹೊಳೆದಾವ ಎಲ್ಲೆಡೆಗೂ ಮೊಳಗಿನ ಹಿರಿನಾದ ಅಂದರೆ ಮಳೆ ಬರುವಾಗ ಪ್ರಕೃತಿಯ ಸ್ಥಿತಿ ಹೇಗೆ ಬದಲಾಗುತ್ತದೆ ಎಂಬುದನ್ನು ಸರಳವಾಗಿ ಕಟ್ಟಿಕೊಡುತ್ತಿದ್ದಾರೆ. ಮಳೆಯು ಬರುವಾಗ ಗುಡುಗು ಯಾವುದೋ ಮಹಾಯುದ್ಧಕ್ಕೆ ಕರೆಕೊಟ್ಟಂತೆ ಯುದ್ಧಕ್ಕೆ ಸಿದ್ಧವಾದಂತೆ ಪರಿಸ್ಥಿತಿಯನ್ನು ನಿರ್ಮಿಸಿದೆ. ಇದು ನೀರ ಬಯಂಕರ ಎಂದಿದ್ದಾರೆ. ಈ ಮಿಂಚು ಯಾವ ಹೊಸ ಹೊಂಚನ್ನು ಸೃಷ್ಟಿಸಿ ಮಳೆಯನ್ನು ಭೂಮಿಗೆ ತರುತ್ತಿದೆಯೋ ಎಂಬ ಆತಂಕ ಮೂಡುವಂತೆ ಮಾಡಿದೆ.

ಗೋಕಾಕ್‌ರವರು ಮಳೆ ಬರುವ ಸಂದರ್ಭದಲ್ಲಿ ಪ್ರಕೃತಿಯಲ್ಲಿ ಮತ್ತು ಆಕಾಶದಲ್ಲಿ ಉಂಟಾಗುವ ಬದಲಾವಣೆಗಳನ್ನು ವಿವರಿಸಿದ್ದಾರೆ. ಆ ಮೂಲಕ ಮೋಡದಲ್ಲಿ ಸಿಡಿಲಿನಲ್ಲಿ ಉಂಟಾಗುವ ಪರಿಣಾಮ ಮಳೆಯ ನೋಟ ಅದು ಉಂಟುಮಾಡುವ ಭಯ ಆತಂಕಗಳನ್ನು ಚಿತ್ರಿಸಿದ್ದಾರೆ. ಆ ಮೂಲಕ ಮಳೆ ಬರುವಾಗಿನ ಸ್ಥಿತಿಯನ್ನು ಸಮಗ್ರವಾಗಿ ಚಿತ್ರಿಸುವ ಪ್ರಯತ್ನ ಮಾಡಿದ್ದಾರೆ.

ಜಿ. ಎಸ್. ಶಿವರುದ್ರಪ್ಪನವರು ತಮ್ಮ 'ಕಾರ್ತಿಕ' ಕವನ ಸಂಕಲನದಲ್ಲಿನ ಮಳೆಯ ರಾತ್ರಿಯ ಒಂದು ಕ್ಷಣ ಎಂಬ ಕವನದಲ್ಲಿ ಮಳೆಬರುವಾಗ ಜನರ ಮೇಲೆ ಬೀರುವ ಪರಿಣಾಮ ಆಸ್ಥಿತಿಯನ್ನು ಕುರಿತು ವಿವರಿಸುವ ಪ್ರಯತ್ನ ಮಾಡಿದ್ದಾರೆ.

"ಹೊರಗೆ ಮಳೆ, ಗುಡುಗು ಮಿಂಚು
ತಲ್ಲಣಿಸದಿರು ಕಂಡ್ಯ ತಾಳು ಮನವೇ
ಹಾಡು ಮುಗಿವುದರೊಳಗೆ ದೀಪ ಹೋಯಿತು
ಹಾಳು ರವಿ ಅಗೋ ಬಂತು
ಏನಿದರ ಕಣ್ಣುಮುಚ್ಚಾಲೆ"[೧೦]

ಮಳೆ ಬರುವ ಸಂದರ್ಭದಲ್ಲಿ ಸಾಮಾನ್ಯ ಜನರ ಮನೆಯ ಚಿತ್ರಣವನ್ನು ಜಿ. ಎಸ್ .ಎಸ್. ಅವರು ತಂದು ಆ ಮೂಲಕ ಮಳೆ ಬರುವಾಗಿನ ಸ್ಥಿತಿಯನ್ನು ವಿವರಿಸುವ ಪ್ರಯತ್ನ ಮಾಡಿದ್ದಾರೆ. ಮಳೆಯು ಆರಂಭವಾಯಿತೆಂದರೆ ಗುಡುಗು ಮಿಂಚು ಆರಂಭವಾಗುತ್ತದೆ. ಗುಡುಗು ಮಿಂಚು ಆರಂಭವಾದಾಗ ವಿದ್ಯುತ್ ಸಂಪರ್ಕ ತೆಗೆಯುತ್ತಾರೆ. ಅದನ್ನೆ ಆಧಾರವಾಗಿಟ್ಟುಕೊಂಡು ತಲ್ಲಣಿಸದಿರು ಕಂಡ್ಯಾತಾಳು ಮನವೇ ಹಾಡು ಮುಗಿದು ಹೋಗುವುದರೊಳಗೆ ದೀಪ ಹೋಯಿತು ಹಾಳು ಶನಿ ಅಗೋ ಬಂತು ಏನಿದರ ಕಣ್ಣಾಮುಚ್ಚಾಲೆ ಅಂದರೆ ಮಳೆ ಬರುವಾಗ ಇಂತಹ ಚಿತ್ರಣವು ಮಳೆಯು ಬರುವಾಗಿನ ಸ್ಥಿತಿಯನ್ನು ಕಟ್ಟಿಕೊಡುತ್ತದೆ.

ಶಿವರುದ್ರಪ್ಪನವರು ತಮ್ಮ 'ಒಲವು ಚೆಲುವು' ಎಂಬ ಸಂಕಲನದ ಮಳೆ ಕವನದಲ್ಲಿ ಮಳೆ ಬರುವಾಗಿನ ಸ್ಥಿತಿಯ ಇನ್ನೊಂದು ಚಿತ್ರಣವನ್ನು ತೋರಿಸುವ ಪ್ರಯತ್ನ ಮಾಡಿದ್ದಾರೆ...

"ಅದೋ ಧುಮುಕುತ್ತಿಹದು
ಪಟ ಪಟ ಮನೆ ಹೆಂಚಿನ ಮೇಲೆ
ಕೆಳಗಿಳಿದರು ಒಳಗಿಳಿದರು
ಅಲ್ಲು ಹೋದರು ಇಲ್ಲೂ ಹೋದರು
ಎಲ್ಲರನು ಮಾತನಾಡಿಸುವಾಸೆ
ಮರದಡಿ ಗಿಡದಡಿ ಹಸುರಿನಲ್ಲಿ
ಕಡೆಗಾ ಚರಂಡಿಯಲ್ಲಿ ಕೊಚ್ಚೆಯಲಿ
ಹರಿದಾಡುವ ಈ ಮುಗಿಲಿನ ಮಕ್ಕಳಿಗೆ

ಈ ನೆಲವೆಂದರೆ ಎನಿತಾಸೆ"[7]

ಮಳೆ ಬರುವಾಗ ಮಳೆಹನಿಗಳು ಅದೋ ಧುಮುಕುತ್ತಿಹುದು. ಎಂದರೆ ಮಳೆಯೇ ಅದು, ಮಳೆ ಬರುವಾಗ ಪಟಪಟನೆ ಹೆಂಚಿನ ಮೇಲೆ ಹನಿಗಳು ಬೀಳುತ್ತಿವೆ. ಈ ಹನಿಗಳು ಮನೆಯಿಂದ ಕೆಳಗೆ ಬಂದಿತು. ನೀರು ಎಲ್ಲೆಡೆಯು ಹರಿಯಿತು. ಮಳೆ ಎಲ್ಲಾ ಕಡೆಯು ಹರಿಯಿತು. ಮಳೆಗೆ ಎಲ್ಲರನ್ನು ಮಾತನಾಡಿಸುವ ಆಸೆ ಮರದಡಿಯಲ್ಲಿ ಗಿಡದಡಿಯಲ್ಲಿ ಕಡೆಗೆ ಚರಂಡಿಯಲ್ಲೂ ಮಳೆ ನೀರು ಹರಿಯುತ್ತದೆ ಹರಿದಾಡುತ್ತದೆ. ಈ ಮುಗಿಲಿನ ಮಕ್ಕಳಿಗೆ ಈ ನೆಲವೆಂದರೆ ಎಂತಹ ಆಸೆಯೋ ತಿಳಿಯದು. ಮಳೆ ಬರುವಾಗ ಯಾವುದೇ ಭಾವವಿಲ್ಲದ ಎಲ್ಲೆಡೆಯು ಹರಿಯುತ್ತದೆ ಎಂದಿದ್ದಾರೆ.

ಮಳೆಯನ್ನು ಮುಗಿಲ ಮಕ್ಕಳು ಎನ್ನುವ ಮೂಲಕ ಮಳೆಗೆ ಹೊಸ ಆಯಾಮವನ್ನು ಕೊಟ್ಟಿದ್ದಾರೆ. ಮಳೆ ಬರುವಾಗಿನ ಸ್ಥಿತಿಯನ್ನು ಈ ಕವನ ಸ್ಪಷ್ಟವಾಗಿ ತಿಳಿಸುತ್ತಿದೆ. ಮಳೆ ಬರುವಾಗ ಎಲ್ಲ ಮನೆಯ ಮೇಲೆ ಹನಿಗಳು ಬಿದ್ದು ಮನೆಯಿಂದ ಕೆಳಗರಿದು ಎಲ್ಲರ ಮನೆಯ ಮಾಡನ್ನು ತೋಯಿಸಿ ಎಲ್ಲೆಡೆಯೂ ನೀರನ್ನು ಹರಿಸಿ ಕೊನೆಗೆ ಚರಂಡಿ ಸೇರಿ ಕೆರೆ ನದಿಗಳನ್ನು ಸೇರುವುದು ಇಂತಹ ಮಳೆ ಹನಿಗೆ ಭೂಮಿಗೆ ಬರಲು ತುಂಬಾ ಆಸೆಯೇನೊ ಎಂದಿದ್ದಾರೆ. ಈ ರೀತಿಯಾಗಿ ಶಿರುದ್ರಪ್ಪನವರು ಮಳೆ ಬರುವಾಗಿನ ಸ್ಥಿತಿಯನ್ನು ಚಿತ್ರಿಸಿದ್ದಾರೆ. ಮಳೆಯು ಎಲ್ಲಾ ಕಡೆ ಆವರಿಸಿದೆ. ಅಂತೆಯೇ ಮಳೆಯು ಯಾವುದೇ ಬೇಧವಿಲ್ಲದೆ ಎಲ್ಲೆಡೆಯು ಬರುತ್ತದೆ. ಮಳೆಗೂ ಭೂಮಿಗೆ ಬರಲು ಸಂತೋಷವೆಂದು ಹೇಳುವ ಪ್ರಯತ್ನ ಮಾಡಿದ್ದಾರೆ.

ಕನ್ನಡದ ಪ್ರಮುಖ ಕವಿಗಳೆಲ್ಲ ಮಳೆಯನ್ನು ಕುರಿತು ಬರೆಯುತ್ತಾ ಮಳೆ ಬರುವಾಗಿನ ಸ್ಥಿತಿಯನ್ನು ಕುರಿತು ಚಿತ್ರಿಸಿದ್ದಾರೆ. ಮಳೆ ಬರುವಾಗ ಭಯಾನಕ ಭೀಕರ ಸ್ವರೂಪದಲ್ಲಿ ಕಾಣುವ ಪ್ರಕೃತಿ ಗುಡುಗು ಮಿಂಚು ಸಿಡಿಲುಗಳ ಭಯ ಸೃಷ್ಟಿಸಿದರೆ ಮಳೆ ಬಂದ ನಂತರ ಇಡಿ ಪ್ರಕೃತಿಗೆ ಹೊಸ ಆನಂದವನ್ನು ತಂದು ಕೊಡುತ್ತದೆ. ಮಳೆಯು ಬರುವಾಗ ಸಾಮಾನ್ಯ ಜನರ ಜೀವನದ ಮೇಲೆ ಅನೇಕ ರೀತಿಯ ಪರಿಣಾಮಗಳು ಉಂಟಾಗುತ್ತವೆ. ಬಾಳೆಯ ತೋಟ, ಅಡಕೆಯ ಮರಗಳು ನಾಶವಾಗುದರೊಂದಿಗೆ ರೈತನ ಸ್ಥಿತಿಯ ಮೇಲೆ ಪರಿಣಾಮ ಬೀರುತ್ತವೆ. ಮಳೆ ಬರುವಾಗ ವಿದ್ಯುತ್ ದೀಪದ ಸಮಸ್ಯೆ ಎದುರಾಗುತ್ತದೆ. ಆ ಮೂಲಕ ಜನರು ಕತ್ತಲಲ್ಲಿ ಕಾಲ ಕಳೆಯಬೇಕಾಗುತ್ತದೆ. ಮಳೆ ಬರುವಾಗ ಭೂಮಿಯ ಮೇಲಿನ ಎಲ್ಲರನ್ನು ಒಂದೇ ರೀತಿಯಲ್ಲಿ ಕಾಣುವಂತೆ ಮಾಡಿದೆ. ಮರದಡಿಯಲ್ಲಿ ಗಿಡದಡಿಯಲ್ಲಿ ಮಳೆಯ ಹನಿಗಳು ಬೀಳುತ್ತವೆ. ಮರಗಿಡಗಳನ್ನು ಉಳಿಸುತ್ತವೆ. ಮಳೆಗೂ ಸಹ ಭೂಮಿಗೆ ಮಳೆ ತರುವುದೆಂದರೆ ಎಲ್ಲಿಲ್ಲದ ಸಂತೋಷ.

ಒಟ್ಟಾರೆ ಮಳೆ ಬರುವಾಗ ಜನರ ಸ್ಥಿತಿಗೆ ತಕ್ಕಂತೆ ಪ್ರಕೃತಿಯ ಸ್ಥಿತಿಗೆ ತಕ್ಕಂತೆ ಜನರ ಮನಸ್ಥಿತಿಗೆ ತಕ್ಕಂತೆ ಮಳೆ ಬರುವಾಗಿನ ಸ್ಥಿತಿಯನ್ನು ಕವಿಗಳು ತಮ್ಮ ಕವನಗಳಲ್ಲಿ ಚಿತ್ರಿಸುವ ಪ್ರಯತ್ನ ಮಾಡಿದ್ದಾರೆ. ಒಟ್ಟಾರೆ ಮಳೆ ಬರುವಾಗಿನ ಸ್ಥಿತಿ ಸ್ಥಳ ಮತ್ತು ಪರಿಸರ ಬದಲಾದಂತೆ ಸ್ಥಿತಿಗತಿಯು ಬದಲಾಗುತ್ತದೆ. ಎಂದು ಹೇಳಬಹುದಾಗಿದೆ.

**ಕೊನೆ ಟಿಪ್ಪಣಿಗಳು**

೧. ಗುಲ್ಜಾರರ ಆಯ್ದ ಕವಿತೆಗಳು ಅನುವಾದ, ಗುರುಮೂರ್ತಿ ಪೆಂಡಕೂರ ಪುಟ ಸಂಖ್ಯೆ ೧

೨. ಅದೇ ಪುಟ

೩. ಶ್ರಾವಣದ ಸೆರಗು, ಲೀಲಾ ಕಲಕೋಟಿ ಪುಟ ಸಂಖ್ಯೆ ೪೩

೪. ಎಪ್ಪತ್ತೆರಡು ಕವಿತೆಗಳು, ಗಂಗಾಧರ ಚಿತ್ತಾಲ, ಪುಟ ಸಂಖ್ಯೆ ೫೨

೫. ಅದೇ ಪುಟ

೬. ಅದೇ ಪುಟ

೭. ಬೆಳ್ಳಕ್ಕಿ ಹಿಂಡು, ಸುಬ್ಬಣ್ಣ ರಂಗನಾಥ ಎಕ್ಕುಂಡಿ, ಪುಟ ಸಂಖ್ಯೆ ೧೧೮

೮. ಅದೇ ಪುಟ

೯. ನವೋದಯ ಕಾವ್ಯ ಭಾಗ ೨, ವಿ. ಕೃ. ಗೋಕಾಕ್, ಪುಟ ಸಂಖ್ಯೆ ೧೮೫

೧೦. ಸಮಗ್ರ ಕಾವ್ಯ ಜಿ. ಎಸ್. ಶಿವರುದ್ರಪ್ಪ, ಪುಟ ಸಂಖ್ಯೆ ೨೫೩

೧೧. ಒಲವು ಚೆಲುವು, ಜಿ. ಎಸ್. ಶಿವರುದ್ರಪ್ಪ, ಪುಟ ಸಂಖ್ಯೆ ೮

## ಅಧ್ಯಾಯ - ೯

## ಮಳೆಯ ಚಿತ್ರಣ

ಮಳೆಯು ಭೂಮಿಗೆ ಮತ್ತು ಈ ಸಮಾಜಕ್ಕೆ ಪ್ರಕೃತಿ ನೀಡಿದ ಕೊಡುಗೆಯಾಗಿದೆ. ಮಳೆ ಬರದ ಪರಿಸರದ ಮತ್ತು ಮನುಷ್ಯನ ಜೀವನವನ್ನು ಕಲ್ಪಿಸಿಕೊಳ್ಳುವುದು ಅಸಾಧ್ಯವಾಗಿದೆ. ಮಳೆಯು ಮನುಷ್ಯನ ಜೀವನವನ್ನು ಅಷ್ಟೊಂದು ಪ್ರಭಾವಿಸದೆ. ಮಳೆ ಬಂದಾಗ ಮಾತ್ರ ಇಡೀ ಜಗತ್ತಿನ ಜೀವಸಂಕುಲ ಸಂತಸಪಟ್ಟು ಸಂಭ್ರಮಿಸುವುದನ್ನು ನಾವು ಕಾಣಬಹುದು. ಮಳೆಯು ಜೀವಿಗಳನ್ನೆಲ್ಲ ಸಂತೋಷಗೊಳಿಸುವ ಈ ಶಕ್ತಿಗೆ ನಾವು ಋಣಿಯಾಗಿರಬೇಕು. ಮಳೆಯಿಂದ ಭೂಮಿಯಲ್ಲಿನ ಎಲ್ಲ ಜೀವಿಗಳು ಆಹಾರವನ್ನು ಮತ್ತು ನೀರನ್ನು ಪಡೆಯುತ್ತವೆ. ತಮ್ಮ ಜೀವನ ಮತ್ತು ಜೀವವನ್ನು ಉಳಿಸಿಕೊಂಡು ತಮ್ಮ ತಮ್ಮ ಅಸ್ಥಿತ್ವವನ್ನು ಕಂಡುಕೊಳ್ಳುತ್ತವೆ. ಹೀಗೆ ಭೂಮಿಯ ಎಲ್ಲ ಜೀವಿಗಳ ಅಸ್ತಿತ್ವಕ್ಕೆ ಮಳೆಯೇ ಕಾರಣವಾಗಿದೆ.

ಮಳೆಯು ಮುಖ್ಯವಾಗಿ ಮೂರು ರೀತಿಯ ಚಿತ್ರಗಳನ್ನು ಹೊಂದಿರುತ್ತದೆ. ಮಳೆ ಬರುವಾಗ ಮೋಡ ಮತ್ತು ಮಿಂಚಿನ ಪ್ರಕೃತಿಯ ಚಿತ್ರಣ ಇದು ಮಳೆ ಬರುವಾಗ ಭೂಮಿಯನ್ನು ತಲುಪುವುದಕ್ಕು ಮುಂಚಿನ ಚಿತ್ರಣ. ಎರಡನೆಯದು ಮಳೆ ಬಂದು ಪ್ರಕೃತಿಯಲ್ಲಿ ಮನುಷ್ಯರ ಜೀವನದ ಮೇಲೆ ಉಂಟುಮಾಡಿದ ಪರಿಣಾಮದ ಚಿತ್ರಣ. ಇದು ಮಳೆ ಬರುವಾಗ ಮತ್ತು ಬಂದು ಮನುಷ್ಯರ ಮತ್ತು ಪ್ರಕೃತಿಯ ಮೇಲೆ ಹೇಗೆ ಪ್ರಭಾವಿಸಿ ಪರಿಣಾಮ ಬೀರಿದೆ ಎಂಬುದರ ಚಿತ್ರಣ. ಮೂರನೇಯದಾಗಿ ಮಳೆಯು ಮನುಷ್ಯ ಮತ್ತು ಪ್ರಕೃತಿಯಲ್ಲಿ ಉಂಟುಮಾಡಿದ ಬದಲಾವಣೆಗಳು ಏನೆಂಬುದರ ಚಿತ್ರಣ. ಇದು ಪರಿಸರದಲ್ಲಿ ಎಲ್ಲಾ ಜೀವಜಾಲಕ್ಕೆ ಅಗತ್ಯ ನೀರನ್ನೆರೆದು ಉಳಿಯಲು, ಬೆಳೆಯಲು ಬಾಳಲು ಸಹಾಯಕವಾಗುತ್ತದೆ. ಹಾಗೆಯೇ ಮನುಷ್ಯನ ಜೀವನ ರೂಪಿಸುವ ಒಕ್ಕಲುತನದ ಕಾರ್ಯಕ್ಷೇತ್ರಕ್ಕೆ ಸ್ಪೂರ್ತಿಯನ್ನು ನೀಡಿ ಅವರ ಜೀವನ ಬದಲಾವಣೆಯಾಗಲು ಸಹಾಯಕವಾಗುತ್ತದೆ. ಮತ್ತೊಂದು ರೀತಿಯ ಭೀಕರ ಚಿತ್ರಣ ಮಳೆಗಿದೆ. ಅದನ್ನು ಪರಿಣಾಮದಲ್ಲಿ ಚರ್ಚಿಸಲಾಗಿದೆ.

ಹೀಗೆ ಮಳೆಯ ಚಿತ್ರಣವನ್ನು ಮೂರು ರೀತಿಯಲ್ಲಿ ವಿವರಿಸುವುದಾದರೆ ಈ ಮೂರು ಆಯಾಮಗಳಲ್ಲಿ ಭಿನ್ನಭಿನ್ನ ಕವಲುಗಳನ್ನು ಪಡೆದು ತನ್ನ ವಿಷಯದ ವಿಸ್ತಾರತೆಯನ್ನು ಪಡೆಯುತ್ತದೆ. ಮಳೆ ಮತ್ತು ಅದರ ಪರಿಸರವೇ ಭಿನ್ನ ಸ್ವರೂಪದ್ದಾಗಿದೆ. ಇದನ್ನು ಆಧುನಿಕ ಕನ್ನಡ ಕವಿಗಳು ತಮ್ಮ ಕವನಗಳಲ್ಲಿ ಕಟ್ಟಿಕೊಡುವ ಪ್ರಯತ್ನ ಮಾಡಿದ್ದಾರೆ.

ಬೇಂದ್ರೆಯವರು ತಮ್ಮ ಸೂರ್ಯಪಾನ ಎಂಬ ಕವನ ಸಂಕಲನದ 'ಮೋಡ' ಎಂಬ ಕವನದಲ್ಲಿ ಮಳೆಯ ಎರಡು ರೀತಿಯ ಚಿತ್ರಣಗಳನ್ನು ಕಟ್ಟಿಕೊಟ್ಟಿದ್ದಾರೆ. ಮಳೆಯು ಬರುವಾಗಿನ ಸ್ಥಿತಿಯೊಂದಿಗೆ ಮಳೆಯ ಚಿತ್ರಣವನ್ನು ವಿವರಿಸಿಕೊಳ್ಳುವ ಪ್ರಯತ್ನ ಮಾಡಿದ್ದಾರೆ. ಅದು...

"ಬೆವತಿತ್ತು ಮೈ ಎಂದು ಕಣ್ಣನೆತ್ತಿದೆ ಮೇಲೆ
ಅದೊ ಅಲ್ಲಿ ಮುಖದಾಕಾರ ಮೋಡ ಮೂಡಿದೆ ಒಂದು
ತಲೆ ಕೆದರಿಕೊಂಡಿದೆ ಟಗರಗೂದಲು ರೀತಿ
ಶುದ್ಧರಾಣಿಗನಂತೆ ಬಾನುಕಾಳೆಹ ಬಯಲು
ಆನೆದೆಲೆ ಸರ್ಪಮುಖ ಲಂಬಕರ್ಣನ ತಂದೆ
ಅಮ್ಮಮ್ಮ ಮಾಮಾಯಿ ಲಿಂಗ ಹಾರುತ್ತಲಿದೆ"[1]

ಮೈ ಬೆವತ್ತಿತ್ತೆಂದು ಕಣ್ಣೆತ್ತಿ ಮೇಲೆ ನೋಡಿದೆ ಎನ್ನುತ್ತಾ, ತಮ್ಮ ಒಂದು ಅನುಭವದ ಮೂಲಕ ಮಳೆಯನ್ನು ಕುರಿತು ಮೋಡದ ಚಿತ್ರಣ ಹೇಗಿದೆ ಎಂಬುದನ್ನು ಹೇಳುವ ಪ್ರಯತ್ನ ಮಾಡಿದ್ದಾರೆ. ಅಲ್ಲಿ

ಆಗಸದಲ್ಲಿ ಮುಖದಾಕಾರ ಮೋಡ ಬಂದು ಮೂಡಿದೆ, ಅಂದರೆ ಆಕಾಶಕ್ಕೆ ಮೋಡವೇ ಮುಖ ಎಂಬ ಹೊಸ ಕಲ್ಪನೆಯನ್ನು ಹುಟ್ಟುಹಾಕುತ್ತಿದ್ದಾರೆ. ಅದು ಹೇಗಿದೆ ಎಂದರೆ ತಲೆಯನ್ನು ಕೆದರಿಕೊಂಡಿದೆ. ಅದು ಟಗರು ಗೂದಲಿನಂತೆ ಕಾಣುತ್ತಿದೆ. ಅದು ಶುದ್ಧರಾಣಿಗನಂತೆ ವಸ್ತ್ರ ಧರಿಸಿದೆ. ಈ ಮೋಡ ಬಾನಿನ ಹೊಟ್ಟೆ ಬಗೆಯಲು ಸಿದ್ಧಗೊಂಡಂತೆ ಕಾಣುತ್ತಿದೆ. ಇಲ್ಲಿ ಬೇಂದ್ರೆಯವರು ಮೋಡದ ಚಿತ್ರಣವನ್ನು ಕುರಿತು ಒಂದು ರೂಪಕವನ್ನೇ ತಂದು ನಿಲ್ಲಿಸಿದ್ದಾರೆ. ಈ ಎಳೆಯ ಮೋಡವು ಹೇಗೆ ಕಾಣುತ್ತಿರೆಂಬುದನ್ನು ತಿಳಿಸುತ್ತಾ ಅದರ ರೌದ್ರವತೆಯನ್ನು ವಿವರಿಸಿದ್ದಾರೆ. ಅದು ಆನೆ ರೀತಿಯ ತಲೆಯನ್ನು ಹೊಂದಿದೆ. ಮುಖ ಸರ್ಪದಂತಿದೆ. ಲಂಬ ಕರ್ಣನ ತಂದೆ ಹೀಗೆ ಮೋಡವನ್ನು ಭಿನ್ನವಾಗಿ ವರ್ಣಿಸುತ್ತ ಅದರ ಚಿತ್ರಣವನ್ನು ಕಟ್ಟಿಕೊಟ್ಟಿದ್ದಾರೆ.

ಮುಂದುವರೆದು...

"ಯಾರದೀ ದಂಡು ಏತಕ್ಕಾಗಿ ಕೂಡಿದೆ ಇಂದು
ಪ್ರಳಯ ಪೂರ್ವದ ರೌದ್ರ ಸದ್ದಿಲ್ಲದೆ ಸಂಚು
ಯುದ್ಧ ಬಡಕರ ಶುದ್ಧಶಾಂತತಾ ವಾದದೊಲು
ಪರಿಣಾಮ ಬೇಸು ರವಲಾ! ಈ ಮಹಾಕೂಟ
ನೋಟವೇ ಇಂತಿರಲು ಆಟ ಎಂತಿದೊ ಮುಂದೆ?
ಮಜ್ಜಿಗೆಯ ಮೇಲ್ ತೇಲಿ ಬೆಣ್ಣೆಯಂತೆ ಸಲೀಲ
ಕಣ್ಮಿಂಚಿ ಕರೆಯುತಿದೆ ಓಹೋ ಘನ ಘನ ನೀಲ!"

ಪ್ರಳಯ ಪೂರ್ವದ ರೀತಿಯಲ್ಲಿ ಕವಿಗೆ ಈ ಮಳೆಯ ಮೋಡವು ಕಾಣುತ್ತಿದೆ. ಮಳೆಯ ಮೋಡದ ಇಂತಹ ಚಿತ್ರಣವನ್ನು ನಾವು ಬೇರೆ ಯಾವ ಮೋಡದ ವರ್ಣನೆಯಲ್ಲೂ ಕಾಣಲು ಸಾಧ್ಯವಿಲ್ಲ. ಮಳೆಯ ಮೋಡವು ಆಕಾಶದಲ್ಲಿ ಮೂಡುವುದನ್ನು ಏತಕ್ಕಾಗಿ ಈ ದಂಡು ಕೂಡಿದೆಯೋ ಇಂದು ಇದರ ಸಂಚು ಅದೇನು ಎಂದು ಪ್ರಶ್ನಿಸುತ್ತಾ ಉತ್ತರವನ್ನು ಹೇಳುವ ರೀತಿಯಲ್ಲಿ ಬಿಡಿಸುತ್ತಿದ್ದಾರೆ. ಇದು ಪ್ರಳಯ ಪೂರ್ವದ ರೌದ್ರ, ಸದ್ದಿಲ್ಲದೀ ಸಂಚು ಯುದ್ಧ ಬಡಕರ ಶುದ್ಧ ಶಾಂತತಾವಾದದೊಲು ಪರಿಣಾಮ ಬೇಸುರವಲಾ! ಮಳೆಯ ಮೋಡವು ಕವಿಯ ಕಣ್ಣಿಗೆ ಪ್ರಳಯ ಪೂರ್ವದ ರೌದ್ರವತೆಯನ್ನು ತೆರೆದಿಡುವಂತೆ ಕಾಣುತ್ತದೆ. ಶಬ್ದವಿಲ್ಲದೇ ಮಾಡಿದ ಈ ಸಂಚು ಯುದ್ಧವನ್ನು ವಿರೊಧಿಸಿ ನಿಂತು ಶಾಂತೆಯನ್ನು ತಮ್ಮ ವಾದವೆಂದು ಹೇಳುವ ರೀತಿಯಲ್ಲಿ ಮಳೆಯು ತಯಾರಾಗಿದೆ. ಇದು ಬೇಸರವನ್ನು ತರಿಸುವ ವಿಷಯವಲ್ಲವೆ ಎಂದಿದ್ದಾರೆ. ಮುಂದುವರೆದು ಈ ಮೋಡಗಳು ಮಹಾಕೂಟದಂತೆ ಕಾಣುತ್ತಿದೆ. ನೋಡುವುದಕ್ಕೆ ಇಷ್ಟೊಂದು ಭಯಂಕರವಾಗಿರುವಾಗ ಇನ್ನೂ ಇದರ ಆಟ ಎಷ್ಟು ಭಯಂಕರವಾಗಿದೆ ಎಂಬುದನ್ನು ನಾವು ಭಯದಿಂದ ಕಾಯಬೇಕಿದೆ ಎಂದಿದ್ದಾರೆ. ಮಳೆಯ ಮೋಡವು ಕಣ್ಮಿಂಚಿನ್ನು ಕರೆಯುತ್ತಿದೆ. ಮಜ್ಜಿಗೆ ಮೇಲೆ ಬೆಣ್ಣೆ ತೇಲುವಂತೆ ಆಕಾಶದಲ್ಲಿ ಕಾಣುತ್ತಿದೆ.

ಹೀಗೆ ಮಳೆಯ ಚಿತ್ರಣವನ್ನು ಕುರಿತು ವಿವರಿಸುತ್ತಾ ಮಳೆಯ ಮೋಡಕ್ಕೆ ಹೊಸ ಪ್ರತಿಮೆಗಳನ್ನು ತಂದುಕೊಡುವ ಪ್ರಯತ್ನವನ್ನು ಬೇಂದ್ರೆಯವರು ಮಾಡಿದ್ದಾರೆ. ಅವರು ಮೋಡವನ್ನು ಆಕಾಶದ ಮುಖ, ಟಗರಿನಂತ ಕೂದಲು, ಆನೆಯಂತಹ ತಲೆ, ಸರ್ಪದಂತಹ ಮುಖ, ಮಹಾಕೂಟ ಎಂಬೆಲ್ಲ ಪ್ರತಿಮೆಗಳನ್ನು ಬಳಸಿ ಪ್ರತಿಮಾ ಧ್ಯಾನಜನಿತ ಮೋಡವನ್ನು ಚಿತ್ರಿಸಿದ್ದಾರೆ.

ಬೇಂದ್ರೆಯವರು ತಮ್ಮ 'ಮಿಂಚು' ಕವನದಲ್ಲಿ ಮಳೆಯ ಚಿತ್ರಣವನ್ನು ಕುರಿತು ಮಳೆಯ ಸಂದರ್ಭದಲ್ಲಿ ಮಿಂಚು ಹೇಗಿದೆ ಎಂಬುದನ್ನು ಕವನದಲ್ಲಿ ಕಟ್ಟಿಕೊಟ್ಟಿದ್ದಾರೆ. ಅದು,

"ಬಾನ ಬರಸಿಡಿಲಲ್ಲ ಕೆಮ್ಮಿಂಚು ಹೊಮ್ಮಿಂಚು
ಅಬ್ಬ! ವಜ್ರದ ಮಿಂಚು, ನೇತ್ರಪಲ್ಲವಿಯ ಈ

ತಂತ್ರ ಬಲ್ಲವರಾರು? ಏನೇನು ಬರೆ ಬರೆದು
ಮತ್ತೆ ಅಳಿಸಿದ ಹಾಗೆ ಮಾಯವಾಗುತ್ತಲಿದೆ"[೩]

ಮಳೆ ಬರುವ ಸಂದರ್ಭದ ಚಿತ್ರಣವನ್ನು ತೆರೆದಿಡುವಂತೆ ಮಿಂಚಿನ ವರ್ಣನೆಯನ್ನು ಕವಿ ಬೇಂದ್ರೆಯವರು ಮಾಡಿದ್ದಾರೆ. ಮಿಂಚು ಇದು ಬರಸಿಡಿಲಲ್ಲ, ಕೆಂಪನೆಯ ಮಿಂಚು, ಹೊಮ್ಮಿಂಚು, ಹೊಳೆಯುವಂತಹ ಮಿಂಚು ಎನ್ನುತ್ತಾ ಅಬ್ಬಾ ಎಂಬ ಉದ್ಗಾರವನ್ನು ತೆಗೆಯುತ್ತಾರೆ. ಇದು ವಜ್ರದ ರೀತಿಯ ಮಿಂಚು, ಇದರ ನೇತ್ರ ಪಲ್ಲವಿಯ ತಂತ್ರವನ್ನು ಯಾರು ಬಲ್ಲರು. ಈ ಮಿಂಚು ಏನೇನೊ ಬರೆ ಬರೆದು ಮತ್ತೆ ಅಳಿಸಿದ ಹಾಗೆ ಬಂದು ಮಾಯವಾಗುತ್ತದೆ. ಮಿಂಚನ್ನು ಕುರಿತು ಚಿತ್ರಿಸುತ್ತಾ ಈ ಮಿಂಚು ಸಾಮಾನ್ಯವಾದುದ್ದಲ್ಲ, ಇದು ವಜ್ರದ ಮಿಂಚು ಇದು ನೇತ್ರ ಪಲ್ಲವಿಯ ಮಿಂಚು, ಇದರ ತಂತ್ರವನ್ನು ಅರಿಯಲು ಸಾಧ್ಯವೇ ಎಂದಿದ್ದಾರೆ.

ಮುಂದುವರೆದು...

"ತತ್‌ಕ್ಷಣಕೆ ಕಾಣದಾಗುವ ಈ ನಿರೀಕ್ಷಣದ
ವೇಗದಲಿ ಆವ ಸಂದೇಶವಿದೆ? ಹಾ! ಮೂಢ
ಮೇಘ ನಾದನ ಹೆಗಲ ಅಪ್ಸರೆಯ ಪಾಂಗದೀ
ಪಾಂಗು ಗಂಗನಾಂಗನೆಯ ಪ್ರಾಯದ ಅಭಿಪ್ರಾಯ!
ನೀರ ಉಗೆ ಹೊಗೆಯನ್ನು ಬೆಂಕಿ ಅಡಗಿರಬಹುದೆ?"[೪]

ಕ್ಷಣ ಮಾತ್ರದಲ್ಲಿ ಕಂಡು ಕಾಣದಂತೆ ಮಾಯವಾಗುವ ಈ ಮಿಂಚಿನ ವೇಗದಲ್ಲಿ ಯಾವ ಸಂದೇಶ ಅಡಗಿದೆಯೋ ಎನ್ನುತ್ತ ಇದರ ವೇಗ ನಮಗೆ ತಿಳಿಯುವುದೆ ಎನ್ನುವರು. ಹೀಗೆ ಪ್ರಶ್ನೆಯನ್ನು ಕೇಳುತ್ತ ಇದಕ್ಕೆ ಉತ್ತರ ಹುಡುಕಬೇಡ ಎಂಬಂತೆ ಹೇ ಮೂಢ ಎಂದಿದ್ದಾರೆ. ನಂತರ ಮಿಂಚಿಗೆ ಒಂದು ಹೊಸ ಪ್ರತಿಮೆಯನ್ನು ರೂಪಿಸಿದ್ದಾರೆ. ಅದು ಹೀಗಿದೆ ಮಳೆಯ ನಾದದ ಹೆಗಲಲ್ಲಿನ ಅಪ್ಸರೆಯ ಕಡೆಗಣ್ಣಿನ ನೋಟದ ರೀತಿ ಈ ಮಿಂಚಿದೆ ಎನ್ನುತ್ತ, ಮಿಂಚನ್ನು ಗಂಗಾಂಗನೆ ಎಂದು ಕರೆದಿದ್ದಾರೆ. ನೀರಿನಲ್ಲಿ ಬೆಂಕಿ ಅಡಗಿರಬಹುದೇ ಎಂದು ಮತ್ತೆ ಪ್ರಶ್ನಿಸುತ್ತಾರೆ. ಹೀಗೆ ಬೇಂದ್ರೆಯವರು ಮಿಂಚಿನ ಸ್ವರೂಪಕ್ಕೆ ಒಂದು ಹೊಸ ರೀತಿಯ ರೂಪಕವನ್ನು ಸೃಷ್ಟಿಸಿ ಮಿಂಚು ಹೇಗಿದೆ ಎಂಬುದು ತಿಳಿಸುತ್ತಾ ಮಳೆಗೆ ಹೊಸ ಚಿತ್ರಣವನ್ನು ನೀಡಿದ್ದಾರೆ.

ಕಣವಿಯವರು ತಮ್ಮ 'ಅಡ್ಡ ಮಳೆ' ಎಂಬ ಕವನದಲ್ಲಿ ಮಳೆಯ ಚಿತ್ರಣವನ್ನು ಚಿತ್ರಿಸುವ ಪ್ರಯತ್ನ ಮಾಡಿದ್ದಾರೆ. ಅದು..

"ಕೋಲ್ಮಿಂಚು ಕೊರೆದು ಕೋರೈಸಿ ಗುಡುಗ ಹುಟ್ಟಿಸಿ ನಡುಗ
ಎಲ್ಲೊ ಬಡಿಯಿತು ಸಿಡಿಲು ಬಟಾಬಯಲು
ನಡುವೆ ತಣ್ಣಗೆ ತಂಪು ನೀರೆಲ್ಲ ಕೆಂಪು ಹೊನಲು
ಬಿರುವಿಸಿಲಿನಾಳಕೆ ಬಗ್ಗುಬಡಿದು ಹೊಸ ಒದ್ದ ಬಿರುಗಾಳಿ
ಆಂದೋಲನದ ಅಮಾಯಕ ತಿರುವು"[೫]

ಕಣವಿಯವರು ಮಳೆ ಬರುವ ಚಿತ್ರಣವನ್ನು ಈ ಕವನದಲ್ಲಿ ತಿಳಿಸಿದ್ದಾರೆ. ಮಳೆ ಬರುವಾಗ ಕೋಲ್ಮಿಂಚನ್ನು ಕೊರೆದು ಕೋರೈಸಿ ಗುಡುಗು ಎಲ್ಲರೆದೆಯಲ್ಲಿ ನಡುಕವನ್ನು ಹುಟ್ಟಿಸಿದೆ. ಹೀಗೆ ಭಯ ಹುಟ್ಟಿಸಿದಂತಹ ಸಿಡಿಲು ಎಲ್ಲೋ ಬಡಿಯಿತು, ಇದರಿಂದ ಎಲ್ಲವೂ ಬಯಲಾಯಿತು. ಅದು ಮನಸ್ಸಿನ ಭಯ ಮತ್ತು ವಾತಾವರಣದ ಭಯವನ್ನು ಕಳೆಯಿತು. ಇದರ ಮಧ್ಯೆ ತಣ್ಣಗೆ ತಂಪನೆಯ ನೀರೆಲ್ಲ ಭೂಮಿಗೆ ಸುರಿದು ಕೆಂಪನೆಯ ಹೊನಲನ್ನು ಅಂದರೆ ನೆಲದ ತುಂಬೆಲ್ಲ ಕೆಂಪನೆಯ ನೀರನ್ನು ಹರಿಸಿತು. ಈ ಬಿರುಬಿಸಿಲಿನ ಆಳಕ್ಕೆ

ಬಗ್ಗುಬಡಿದು ಹೊರ ಬಿದ್ದಂತಹ ಬಿರುಗಾಳಿಯ ಆಂದೋಲನ ಅಮಾಯಕ ತಿರುವು ಎಂದಿದ್ದಾರೆ. ಹೀಗೆ ಮಳೆಯ ಚಿತ್ರಣವನ್ನು ಕುರಿತು ವಿಶ್ಲೇಷಿಸಿದ್ದಾರೆ.

ನಿಸಾರ್ ಅಹಮದ್ ಅವರು ತಮ್ಮ 'ಸಂಜೆ ಐದರ ಮಳೆ' ಎಂಬ ಕವನದಲ್ಲಿ ಮಳೆಯ ಚಿತ್ರಣವನ್ನು ಹೀಗೆ ಚಿತ್ರಿಸಿದ್ದಾರೆ.

"ಶಬ್ದದಿಂದ ಕಬ್ಬು ಭತ್ತವ ಥಳಿಸಿ
ಬೆಟ್ಟಗಳನಳಿಸಿ
ಸೊಂಬೇರಿ ಬಿಸಿಲ ಹೊಡೆದಟ್ಟಿ
ಬಾನಗಲ ಬಿಡಾರಗಳ ಕಟ್ಟಿ"[1]

ಮಳೆ ಹೇಗಿದೆ, ಹೇಗೆ ಬರುತ್ತಿದೆ ಎಂಬುದನ್ನು ನಿಸಾರ್ ಅಹಮ್ಮದ್ ಅವರು ಹೀಗೆ ಕಟ್ಟಿಕೊಟ್ಟಿದ್ದಾರೆ. ಮಳೆ ಶಬ್ದದಿಂದಲೇ ಕಬ್ಬು, ಭತ್ತವನ್ನೆಲ್ಲಾ ಥಳಿಸಿದಿದೆ ಅದು ಬೆಟ್ಟ-ಗುಡ್ಡಗಳನ್ನು ಅಳಿಸಿದೆ. ಸೋಂಬೇರಿಯಾದ ಬಿಸಿಲನ್ನು ದೂರಮಾಡಿ ಬಾನಗಲ ಬಿಡಾರಗಳನ್ನು ಮಾಡಿಸಿದೆ. ಅಂದರೆ ಮಳೆಯ ಚಿತ್ರಣವನ್ನು ಇಲ್ಲಿ ಹೀಗೆ ಗುರುತಿಸಬಹುದು. ಮಳೆಯು ಪ್ರಕೃತಿಯ ಚಿತ್ರಣವನ್ನು ಹೇಗೆ ತೆರೆದಿಡುತ್ತಿದೆ, ಅದು ಕವಿಗೆ ಬೆಟ್ಟಗಳನ್ನು ಅಳಿಸಿದಂತೆ ಬೆಳೆಗಳನ್ನು ಥಳಿಸಿದಂತೆ ಬಿಸಿಲನ್ನು ಹೊಡೆದಟ್ಟಿದಂತೆ ಮಳೆ ಬರುತ್ತಿದೆ ಎಂದಿದ್ದಾರೆ. ಒಟ್ಟಾರೆಯಾಗಿ ಮಳೆಯ ಚಿತ್ರವನ್ನು ಕುರಿತು ಭಿನ್ನ ರೀತಿಯಲ್ಲಿ ಅಭಿವ್ಯಕ್ತಪಡಿಸಿದ್ದಾರೆ.

ಸಿ. ಪಿ. ಕೃಷ್ಣಕುಮಾರ್ ಅವರು ತಮ್ಮ 'ಮಳೆ' ಎಂಬ ಕವನದಲ್ಲಿ ಮಳೆಯನ್ನು ಕುರಿತು ವರ್ಣಿಸುತ್ತ ಮಳೆಯ ಚಿತ್ರಣದ ಬಗ್ಗೆ ಹೀಗೆ ಬರೆದಿದ್ದಾರೆ.

"ಈಗೀಗ ಮಳೆಯು
ರಾಜಕೀಯ ಕಲಿತಿದೆ
ನೆರೆಯೂರಿನಲ್ಲಿ ಸುರಿದು ನೆರೆ ತಂದರೆ
ಈ ಊರಿನಲ್ಲಿ ಸುರಿಯುವುದಿಲ್ಲ"[2]

ಮಳೆಯ ಇನ್ನೊಂದು ಚಿತ್ರಣವನ್ನು ಸಿ. ಪಿ. ಕೆ.ಯವರು ಈ ಕವನದಲ್ಲಿ ತಂದಿದ್ದಾರೆ.ಮಳೆ ಈಗೀಗ ರಾಜಕೀಯ ಕಲಿತಿದೆ. ಅಂದರೆ ಮೊದಲು ಮಳೆ ಈ ರೀತಿಯಾಗಿರಲಿಲ್ಲ, ಎಲ್ಲೆಡೆಯು ಬರುವುದು, ಆದರೆ ಈಗ ರಾಜಕೀಯ ಕಲಿತಿದೆ ಎಂದಿದ್ದಾರೆ. ಮಳೆಯ ಈ ವರ್ತನೆಗೆ ಮನುಷ್ಯನೆ ಕಾರಣನೆಂಬ ವಿಷಾದ ಕಾಣುತ್ತಿದೆ. ನೆರೆಯೂರಿನಲ್ಲಿ ಸುರಿದು ಈ ಊರಿನಲ್ಲಿ ಸುರಿಯುವುದಿಲ್ಲ, ಮಳೆ ಪಕ್ಕದ ಊರಿನಲ್ಲಿ ಬಂದು ಈ ಊರಿನಲ್ಲಿ ಬರುವುದಿಲ್ಲ ಎಂದಿದ್ದಾರೆ. ಹೀಗೆ ಮಳೆಯ ವಾಸ್ತವ ಚಿತ್ರಣವನ್ನು ಚಿತ್ರಿಸಿದ್ದಾರೆ.

ಹೀಗೆ ಮಳೆಯ ಚಿತ್ರಣವನ್ನು ಕವಿಗಳು ತಮ್ಮ ಕವನಗಳಲ್ಲಿ ವಿವರಿಸುವ ಪ್ರಯತ್ನವನ್ನು ಮಾಡಿದ್ದಾರೆ. ಮಳೆಯ ಚಿತ್ರಣವು ಮೋಡ, ಮಿಂಚು, ಮಳೆ, ಪ್ರಕೃತಿಯ ಮತ್ತು ಮನುಷ್ಯನನ್ನು ಕುರಿತ ಚಿತ್ರಣವೇ ಆಗಿದೆ. ಮಳೆಯಿಂದಾಗಿ ಮನುಷ್ಯನ ಜೀವನದ ಚಿತ್ರಣವನ್ನು ಬಿಡಿಸುವ ಚಿತ್ರಕಾರ ಮಳೆಯೆ. ಅಂದರೆ ಮಳೆಯು ಮನುಷ್ಯನ ಜೀವನವನ್ನು ಅಷ್ಟರಮಟ್ಟಿಗೆ ಪ್ರಭಾವಿಸಿದೆ ಎಂದು ಹೇಳಬಹುದಾಗಿದೆ. ಮಳೆಯ ಚಿತ್ರಣವು ಆಕಾಶಕ್ಕೆ ಮಳೆಯ ಮೋಡವೆ ಮುಖವಾಗಿ ರೂಪಿಸಿದ ಪ್ರತಿಮೆ ಅತ್ಯಂತ ವಿಶಿಷ್ಟವಾಗಿದೆ, ಮಜ್ಜಿಗೆಯಲ್ಲಿ ತೇಲುವ ಬೆಣ್ಣೆಯಂತೆ, ಸಂಜೆನಿಂದ ಸೇರಿದ ಮಹಾಕೂಟ, ಸರ್ಪಮುಖ, ಎಂದಿದ್ದಾರೆ. ಮುಂದುರೆದು ಮಿಂಚನ್ನು ಕೆಮ್ಮಿಂಚು, ಹೊಮ್ಮಿಂಚು, ವಜ್ರದ ಮಿಂಚು ಎಂದು ಕವಿಗಳು ವರ್ಣಿಸಿ ಮಳೆಯ ಚಿತ್ರಣವನ್ನು ಕಟ್ಟಿಕೊಡುವ ಪ್ರಯತ್ನ ಮಾಡಿದ್ದಾರೆ. ಗುಡುಗು ಎದೆಯಲ್ಲಿ ಉಂಟುಮಾಡುವ ಆತಂಕ, ಮಳೆಯ ಹೆಗಲಲ್ಲಿ ಕುಂತ ಮಿಂಚಿನ ಅಪ್ಸರೆಯು ಕಣ್ಣಿನ ಹುಬ್ಬನ್ನು ಹಾರಿಸುವಂತೆ ಮಿಂಚು ಕ್ಷಣ ಮಾತ್ರದಲ್ಲಿ ಮಾಯವಾಗುವ ಸ್ಥಿತಿ ಇವೆಲ್ಲವು ಮಳೆಯ ಚಿತ್ರಣಕ್ಕೆ ಹಿಡಿದ ಕೈಗನ್ನಡಿಗಳಾಗಿವೆ.

**ಕೊನೆ ಟಿಪ್ಪಣಿ**

೧. ಔದುಂಬರ ಗಾಥೆ, ಸಂಪುಟ ೪, ಸಂ. ವಾಮನ ಬೇಂದ್ರೆ, ಪುಟ ಸಂಖ್ಯೆ ೨೩೬

೨. ಸೂರ್ಯಪಾನ, ದ. ರಾ. ಬೇಂದ್ರೆ ಪುಟ ಸಂಖ್ಯೆ ೫೫

೩. ಅದೇ ಪುಸ್ತಕ ಪುಟ ಸಂಖ್ಯೆ ೫೬

೪. ಅದೇ ಪುಟ

೫. ಕಣವಿ ಸಮಗ್ರ ಕಾವ್ಯ ಪುಟ ಸಂಖ್ಯೆ ೪೫೨

೬. ನಿಸಾರ್ ಅಹಮದ್‌ರ ಸಮಗ್ರ ಕಾವ್ಯ ಪುಟ ಸಂಖ್ಯೆ ೩೫೩

೭. ಸಿ. ಪಿ. ಕೆ ಸಮಗ್ರ ಕಾವ್ಯ ಪುಟ ಸಂಖ್ಯೆ ೧೩೫

## ಅಧ್ಯಾಯ – ಹತ್ತು

## ಮಳೆಯ ವರ್ಣನೆ

ಮಳೆಯು ಪ್ರಕೃತಿಯ ಕೊಡುಗೆ. ಮಳೆಯಿಂದ ಭೂಮಿಯಲ್ಲಿನ ಎಲ್ಲಾ ಜೀವ ರಾಶಿಗಳಿಗೂ ಕುಡಿಯಲು ನೀರು ಮತ್ತು ಆಹಾರ ದೊರೆಯುವುದು. ಮಳೆಯಿಂದ ಎಲ್ಲರೂ ಬದುಕಿ ಬಾಳುತಿದ್ದಾರೆ. ಇಂತಹ ಮಳೆಯು ಮನುಷ್ಯರ ಜೀವನದ ಆಧಾರ ಸ್ಥಂಭವಾಗಿದೆ. ಮಳೆಯು ಪ್ರತಿಯೊಂದು ಜೀವರಾಶಿಗೂ ಅತ್ಯಾವಶ್ಯಕವಾಗಿದೆ. ಮಳೆಯು ಎಲ್ಲಾ ಜೀವಿಗಳಲ್ಲಿಯೂ ಜೀವನ ಪ್ರೀತಿಯನ್ನು ಹುಟ್ಟಿಸಿಜೀವನ ಉತ್ಸಾಹವನ್ನು ಕೆರಳಿಸುತ್ತದೆ. ಅದಕ್ಕಾಗಿ ಮಳೆಯನ್ನು ಪ್ರಕೃತಿಯಲ್ಲಿ ಪ್ರೀತಿಯದೇವರೆಂದು ನಂಬಿ ಆರಾಧಿಸಿ ವರ್ಣಿಸಲಾಗುತ್ತದೆ. ಮಳೆಯನ್ನು ವರುಣದೇವನೆಂದು ನಂಬಿ ಪೂಜಿಸಲಾಗುತ್ತದೆ. ಮಳೆಗೆ ದೈವದ ರೂಪದಿಂದ ಆರಾಧಿಸಲಾಗುತ್ತದೆ.

ಇಂತಹ ದೈವದ ಸ್ವರೂಪ ತಾಳಿದ ವರುಣದೇವನಿಗೆ ಅಥವಾ ಮಳೆಗೆ ಕನ್ನಡ ಸಾಹಿತ್ಯದಲ್ಲಿ ವಿಶೇಷ ಸ್ಥಾನವನ್ನು ನಿಡಲಾಗಿದೆ. ಮಳೆಯಿಂದ ಪ್ರಕೃತಿಗೆ ಚೇತನ ದೊರೆಯುತ್ತದೆ. ಈ ಕಾರಣದಿಂದಲೋ ಏನೋ ಮಳೆ ಎಂದರೆ ಕನ್ನಡ ಕವಿಗಳಿಗೆ ಎಲ್ಲಿಲ್ಲದ ಪ್ರೀತಿ. ಅದಕ್ಕಾಗಿ ತಮ್ಮ ಸಾಹಿತ್ಯದಲ್ಲಿ ಮಳೆಯನ್ನು ಅದರ ಸ್ವರೂಪವನ್ನು ಅದರ ಭಾವ ಭಂಗಿ ರೂಪ ಚಿತ್ರಣಗಳನ್ನು ಕವನಗಳಲ್ಲಿ ಚಿತ್ರಿಸುವ ಪ್ರಯತ್ನ ಮಾಡಿದ್ದಾರೆ. ಮಳೆಗೆ ಮನ ಸೋತ ಕವಿಗಳು ಮಳೆಯನ್ನು ಸ್ವಾಗತಿಸಿ, ಮಳೆ ಬರುವಾಗಿನ ಸ್ಥಿತಿ, ಮಳೆಯ ಆರಂಭ, ಮಳೆಯ ಚಿತ್ರಣವನ್ನೂ ಒಳಗೊಂಡಂತೆ ಗುಡುಗು ಮಿಂಚು ಸಿಡಿಲು ಮೋಡ ನೀರು ಎಲ್ಲವನ್ನು ವರ್ಣಿಸಿದ್ದಾರೆ. ಮಳೆಗಾಗಿ ಕಾದು ಕುಳಿತ ಭೂಮಿಯ ವರ್ಣನೆ, ರೈತನ ವರ್ಣನೆ, ಕೃಷಿಯ ವರ್ಣನೆ, ಗಿಡ ಮರ ಪ್ರಕೃತಿಯ ವರ್ಣನೆಗನ್ನು ತಮ್ಮ ಕವನಗಳಲ್ಲಿ ತಂದಿದ್ದಾರೆ. ಒಟ್ಟಾರೆಯಾಗಿ ಮಳೆಯನ್ನು ಕುರಿತ ವರ್ಣನೆಯನ್ನು ಆಧುನಿಕ ಕನ್ನಡದ ಬಹುತೇಕ ಕವಿಗಳು ಮಾಡಿದ್ದಾರೆ. ಅಂತಹ ವರ್ಣನೆಗಳೆಲ್ಲವನ್ನು ಇಲ್ಲಿ ಚರ್ಚಿಸಲು ವಿವರಿಸಲು ಸಾಧ್ಯವಿಲ್ಲ, ಆದಕಾರಣ ಮಳೆಯನ್ನು ಕುರಿತ ಮುಖ್ಯ ಕವನಗಳನ್ನು ವಿಶ್ಲೇಷಿಸಲಾಗುತ್ತದೆ.

ಬೇಂದ್ರೆಯವರು ಸಖೀಗೀತ ಕವನ ಸಂಕಲನದ 'ಚಿತ್ತಿ ಮಳೆಯ ಸಂಜೆ' ಕವನದಲ್ಲಿ ಮಳೆಯ ವರ್ಣನೆಯನ್ನು ಈ ರೀತಿಯಾಗಿ ಮಾಡಿದ್ದಾರೆ....

"ಇದಿರು ಗುಡ್ಡದ ತಲೆಗೆ
ಮೋಡಮುಸುಕೆಳೆವಾಗ
ಬದಿಯ ಗುಡ್ಡದ ಮ್ಯಾಲೆ
ಬಿಸಿಲು ಮೈ ಚಾಚ್ಯಾವೆ"

ಮಳೆಯ ಮೋಡವು ಗುಡ್ಡಕ್ಕೆ ಅದರ ತಲೆಗೆ ಮುಸುಕು ಮುಚ್ಚಿಕೊಳ್ಳುವಂತೆ ಕವಿಗೆ ಕಂಡಿದೆ. ಬದಿಯ ಗುಡ್ಡದ ಮ್ಯಾಲೆ ಬಿಸಿಲು ಮೈಚಾಚಿಕೊಂಡಂತೆ ಕಾಣುತ್ತದೆ. ಬೇಂದ್ರೆ ಅವರು ಇಲ್ಲಿ ಎರಡು ಚಿತ್ರಣಗಳನ್ನು ತಂದು ಚಿತ್ರಸಿದ್ದಾರೆ. ಅವು ಮಳೆ ಮತ್ತು ಬಿಸಿಲು, ಮಳೆಯ ಮೋಡ ಗುಡ್ಡದ ಮೇಲೆ ಬರುತ್ತಿರುವುದು ಗುಡ್ಡಕ್ಕೇ ಮುಸುಕು ಹೊದಿಸಿದಂತೆ ಕಾಣುತ್ತದೆ. ಅಂದರೆ ಮಳೆಯು ಭೂಮಿಗೆ ವಸ್ತ್ರದಂತೆ ತೊರುತ್ತಿದೆ ಎಂದಿದ್ದಾರೆ.

ಮುಂದುವರಿದು....

"ತೋಪು ತೋಟದ ಗಾಳಿ

ನುಗ್ಗಿ ನುಸುಳಿ ಬಂದು

ಹುಲ್ಲುಗಾವಲು ಸವರಿ

ಬೈತಲೆ ಬಾಚ್ಯಾವ”[೨]

ಮಳೆ ಬರುವಾಗ ಬೀಸುವ ಗಾಳಿಯನ್ನು ಕುರಿತು ತೋಪುಗಳಿಂದ ತೋಟಗಳಿಂದ ಬೀಸುವಂತಹ ಗಾಳಿ ನುಗ್ಗಿ ನುಸುಳಿಕಂಡು ಬರುತ್ತಿದೆ. ಹುಲ್ಲುಗಾವಲುಗಳನ್ನು ಸವರಿಕೊಂಡು ಬೀಸಿ ಭೂಮಿಯ ಭೈತಲೆಯನ್ನು ಬಾಚುತ್ತಿದೆ. ಇಲ್ಲಿ ಬೇಂದ್ರೆಯವರು ಭೂಮಿಯನ್ನು ಹೆಣ್ಣಿಗೆ ಹೋಲಿಸುವ ಪ್ರಯತ್ನ ಮಾಡಿದ್ದಾರೆ. ಮಳೆಯ ಮೋಡವು ಮುಸುಕಿನಂತೆ ಕಂಡರೆ ಗಾಳಿಯು ಬಾಚಣಿಕೆಯಂತೆ ಹುಲ್ಲು ಭೂಮಿಯ ಕೂದಲಿನಂತೆ ಕಾಣುತ್ತದೆ, ಹೀಗೆ ಮಳೆಯನ್ನು ಭೂಮಿಗೆ ಮೋಡವನ್ನು ಗಾಳಿಯನ್ನು ಪರಸ್ಪರ ಪೂರಕವಾದ ಭಿನ್ನ ಸೌಂದರ್ಯದ ರೂಪಕಗಳಂತೆ ಬಳಸಿ ವರ್ಣಿಸಿದ್ದಾರೆ.

ಮುಂದುವರಿದು...

“ಪಡುವಲಕ ಮೂಡಿದ ಕಿರಣ

ಮೂಡಲಕ ಚಿಮ್ಮಿಕಂಡು

ಅರಿಷಿಣ ಕಂಕುಮ ತಂದು

ಮರದ್ಹಣಿಗೆ ಹಚ್ಯಾವ”[೩]

ಪಶ್ಚಿಮ ದಿಕ್ಕಿನಲಿ ಮುಳುಗುತ್ತಿರುವ ಸೂರ್ಯನ ಕಿರಣಗಳು ಪೂರ್ವದಲ್ಲಿರುವ ಮರಗಳ ಹಣೆಗೆ ಅರಿಷಿಣ ಕುಂಕುಮ ಹಚ್ಚಲು ಮೂಡಣದಿಂದ ಚಿಮ್ಮಿಕೊಂಡು ಬರುತ್ತಿವೆ ಎಂದಿದ್ದಾರೆ. ಹೀಗೆ ಬೇಂದ್ರೆಯವರು ಮಳೆ ಬರುವುದನ್ನು ಒಂದು ಹೆಣ್ಣು ಸಿಂಗರಿಸಿ ಕೊಂಡಂತೆ ವರ್ಣಿಸಿ, ಮಳೆಯು ಭೂಮಿಗೆ ವಸ್ತ್ರದಂತೆ ಮುಸುಕು ಮುಚ್ಚಿ ಗಾಳಿ ಬಾಚಣಿಕೆಯಾಗಿ ಭೂಮಿಯ ತಲೆಯನ್ನು ಬಾಚಿ ಸೂರ್ಯ ಮರ ಗಿಡಗಳ ಹಣೆಗೆ ಅರಿಷಿಣ ಕುಂಕುಮ ಹಚ್ಚುವಂತೆ ಕಲ್ಪಿಸಿ ವರ್ಣಿಸಿದ್ದಾರೆ. ಹೀಗೆ ಬೇಂದ್ರೆಯವರು ಮಳೆಯನ್ನು ಹೆಣ್ಣಿನ ಸೌಂದರ್ಯದೊಂದಿಗೆ ಹೋಲಿಸಿ ವರ್ಣಿಸಿದ್ದಾರೆ.

ಕುವೆಂಪು ಅವರು ಮುಂಗಾರು ಕವನ ಸಂಕಲನದಲ್ಲಿನ ‘ಜಡಿಮಳೆ’ ಕವನದಲ್ಲಿ ಮಳೆಯನ್ನು ಕುರಿತು ಹೀಗೆ ವರ್ಣಿಸಿದ್ದಾರೆ.

“ಹಸಿರು ಬಯಲ ಮೇಲೆ

ಬಾಣ ಜಾಲದೋಲೆ

ಮಳೆಯ ಹನಿಗಳೆರಗಲೋಡಂ

ತುಂತುರಾವಿ ಲೀಲೆ”[೪]

ಮಳೆಯು ಹಸಿರಿನ ಬಯಲಲ್ಲಿ ಬೀಳುತ್ತಿರುವ ದೃಶ್ಯವು ಬಯಲಲ್ಲಿ ಬಾಣಗಳನ್ನು ಸುರಿದಂತೆ ಬೀಳುತ್ತಿವೆ ಎಂದಿದ್ದಾರೆ. ಮಳೆಯು ಬಾಣಗಳಂತೆ ಬೀಳುತ್ತಿರುವುದು ಇಲ್ಲಿನ ಜೀವಿಗಳಿಗೆ ಉಡುಗೊರೆಯಂತಿದೆ. ಮಳೆಯು ಬರುತ್ತಿರುವುದು ತುಂತುರು ಆವಿಯಂತೆ ಕಾಣುತ್ತಿದೆ. ಭೂಮಿಗೆ ಮಳೆಯು ಒಂದು ಪವಾಡವನ್ನೇ ಮಾಡಿದಂತೆ ಬಂದು ಸುರಿಯುತ್ತಿದೆ.

ಮುಂದುವರೆದು...

“ತಲೆಯ ಕೆದರಿ ಕಾಳಿ

ಕುಣಿವತೆರನೆ ತಾಳಿ

ಪವನ ಹರಿಯು ಗರ್ಜಿಸಿಂಹ

ವಿಪಿನ ಕುರಿಯಸೀಳಿ"[20]

ಕುವೆಂಪು ಅವರು ಬರುತ್ತಿರುವ ಮಳೆಯು ಕಾಳಿಯ ರೂಪವನ್ನು ತಾಳಿದಂತಿದೆ. ಮಳೆಯು ರೌದ್ರಾವತಾರವನ್ನು ಹೊಂದಿ ಭೂಮಿಗೆ ಬರುತ್ತಿದೆ. ಮಳೆ ಕಾಳಿಯ ನೃತ್ಯದಂತೆ ಭಯಂಕರವಾಗಿದೆ. ಕಾಳಿಯಂತೆ ಕುಣಿಯುತ್ತಾ ಬರುತ್ತಿರುವ ಮಳೆಯು ಗಾಳಿಯನ್ನು ಸೀಳಿಕೊಂಡು ಸಿಂಹದಂತೆ ಘರ್ಜಿಸಿಕೊಂಡು ಬರುತ್ತಿದೆ. ಕಾಡಿನ ಕುರಿಯನ್ನು ಸೀಳಿಕೊಂಡು ಬರುತ್ತಿದೆ. ಹೀಗೆ ಮಳೆಯು ರುದ್ರ ರೂಪವನ್ನು ತಾಳಿದೆ. ಮಳೆಯ ವರ್ಣನೆ ಯನ್ನು ಕುರಿತ ಕುವೆಂಪು ಅವರ ಕಾಳಿಯ ಚಿತ್ರಣ ಭಿನ್ನವಾಗಿದೆ. ಮಳೆ ಭೂಮಿ ಬರುವಾಗ ಶಕ್ತಿ ದೇವತೆಯ ರೂಪ ತಾಳಿಕೊಂಡು ಬರುತ್ತಿದೆ ಎಂದಿದ್ದಾರೆ.

ಗಂಗಾಧರ ಚಿತ್ತಾಲರು 'ಎಪ್ಪತ್ತೆರಡು ಕವಿತೆಗಳು' ಕವನ ಸಂಕಲನದ ವರುಣ ಎಂಬ ಕವನದಲ್ಲಿ ಮಳೆಯನ್ನು ಕುರಿತು ಹೀಗೆ ವರ್ಣಿಸಿದ್ದಾರೆ.

"ಈ ಪುರಾತನ ಸನಾತನ ಸನ್ನಿದಿಯಲ್ಲಿ ನಿಂತು

ದಿಗಂತ ವಿಶ್ರಾಂತನಾದ

ವರುಣನ ವೈಭವವನ್ನು ನೋಡು ಜಿವವೇ!

ಕಾಲನಂತೆ ಪ್ರಾಚೀನನಾದರು ಅರ್ವಾಚೀನನಿವ ಅನಿರ್ವಚನೀಯನಿವ

ತನ್ನ ಬೆಳ್ಳಿ ಮಕ್ಕಳನ್ನೆಲ್ಲ

ಭೂತೀರಗಳಲ್ಲಿ ಕುಣಿಯಲು ಬಿಟ್ಟು

ಆಲ ಪರ್ವಗಳಲ್ಲಿ ತೊಡಗಿಹನು ವಿಚಿಲೋಲ"[21]

ಚಿತ್ತಾಲರು ಮಳೆಯನ್ನು ಕುರಿತು ನಿಂತಿರುವ ಸ್ಥಳದ ನೆಲೆಯಲ್ಲಿ ಇಂತಹ ಹಳೆಯದಾದ ಪುರಾತನ ಸ್ಥಳದಲ್ಲಿ ನಿಂತು ದಿಗಂತದವರೆಗೂ ವಿಶ್ರಾಂತನಂತೆ ಕಾಣುತ್ತಿರುವ ಮಳೆಯನ್ನು ನೋಡು ಜೀವವೇ ಎಂದಿದ್ದಾರೆ. ಈ ಮಳೆಯು ಕಾಲನಷ್ಟು ಹಳೆಯದಾದದ್ದು. ಮಳೆ ಭೂಮಿಯಂತೆ ಪುರಾತನವಾದದ್ದು ಎಂದಿದ್ದಾರೆ. ಆದರೂ ಹೊಸತನವನ್ನು ತಂದಿದೆ. ಮಳೆಯ ನಿರ್ವಚನ ಮಾಡಲು ಸಾಧ್ಯವಿಲ್ಲ, ಮಳೆಯು ತನ್ನ ಮಕ್ಕಳಾದ ಮಳೆಯ ಹನಿಗಳನ್ನೆಲ್ಲ ಭೂಮಿಯ ತುಂಬೆಲ್ಲ ಹರಿಯಲು ಬಿಟ್ಟಿದೆ ಎಂದಿದ್ದಾರೆ. ಚಿತ್ತಾಲರು ಮಳೆಯ ವೈಭವವನ್ನು ನೋಡುವಂತಹ ಸಂತಸ ಅದ್ಭುತವಾದದ್ದು, ಅದನ್ನು ಕಾಣು ಜೀವವೇ ಎಂದು ಹೇಳಿಕೊಂಡಿದ್ದಾರೆ. ಮಳೆಯು ಕಾಲನಂತೆ ಹಳೆಯದಾದರೂ ಪ್ರತಿ ಬಾರಿಯೂ ಹೊಸತನದಿಂದ ಕೂಡಿದೆ, ಭೂಮಿಗೆ ಹೊಸ ಅನುಭವವನ್ನು ತರುತ್ತದೆ. ಮಕ್ಕಳ ರೂಪದ ಹನಿಗಳನ್ನು ಭೂಮಿಗೆ ಕುಣಿಯಲು ಬಿಟ್ಟು ಜಲ ಪ್ರಳಯವನ್ನೇ ಸೃಷ್ಟಿಸಿದೆ.

ಅನ್ನಪೂರ್ಣ ಅವರು ಅವ್ಯಕ್ತ ಕವನ ಸಂಕಲನದ 'ಮಳೆಗಾಲದಲ್ಲಿ' ಎಂಬ ಕವನದಲ್ಲಿ ಮಳೆಯನ್ನು ಕುರಿತು ಈ ರೀತಿ ವರ್ಣಿಸಿದ್ದಾರೆ,

"ಮಣ್ಣಿನೊಳಗೆ ಕುಳಿತಿಹ ಬೀಜಗಳೆಲ್ಲ

ಸಣ್ಣ ಕುಡಿಯ ಮೇಲೆ ತರಲು ಕಾದಿಹವೆಲ್ಲ

ತಣ್ಣನೇಯ ಹವೆಯನ್ನು ಬಯಸಿರುವೆಲ್ಲ

ಇನ್ನೆಲ್ಲ ಹಸಿರುಡೆಗೆ ಅಭಿಷೇಕವಹುದಲ್ಲ"[22]

ಮಣ್ಣಿನೊಳಗಿರುವ ಬೀಜಗಳು ಎಂದರೆ ಪ್ರಕೃತಿಯಲ್ಲಿ ಸಾಮಾನ್ಯವಾಗಿರುವ ಮತ್ತು ರೈತರು ಭಿತ್ತಿರುವ ಬೀಜಗಳು ಎಲ್ಲಕ್ಕೂ ಮಳೆ ಅಗತ್ಯ. ಮಳೆಯಿಂದಲೇ ಹುಟ್ಟಿ ಬೆಳೆಯುತ್ತವೆ. ಅವೆಲ್ಲ ಭೂಮಿಯಿಂದ

ಹೊರಬರಲು ಕಾದಿವೆ, ತಣ್ಣನೆಯ ಹವೆಯನ್ನು ಬಯಸಿವೆ, ಮಿಕ್ಕ ಗಿಡ ಮರಗಳೆಲ್ಲ ಹಸಿರಾದ ಉಡುಗೆಯನ್ನು ತೊಟ್ಟು ಅಭಿಷೇಕ ಮಾಡಿಕೊಂಡು ಕಂಗೊಳಿಸುತ್ತಿವೆ ಎಂದಿದ್ದಾರೆ. ಮಳೆಯ ಕಾರಣದಿಂದ ಬೀಜಗಳೆಲ್ಲ ಹುಟ್ಟಿ ಗಿಡ ಮರಗಳಾಗಿ ಹಸಿರನ್ನು ಹೊತ್ತು ಕಂಗೊಳಿಸುತ್ತವೆ.

ಮುಂದುವರಿದು....

“ವಸುಧೆಗೆ ಸಂಭ್ರಮದ ಸ್ನಾನವಿದು
ನಿಸರ್ಗ ಸುಂದರಿಗೆ ಒಸಗೆಯಿದೇನು
ಹಸು ಎಮ್ಮೆ ಕುರಿಯಾದಿ ಪ್ರಾಣಿಗಳಿನ್ನು
ಹಸಿರು ಹುಲ್ಲ ಮೇಯಯಲಿಕೆ ಹೊರಡುವವಿನ್ನು”[೮]

ಮಳೆಯು ಬರುತ್ತಿರುವುದು ಭೂಮಿಗೆ ಸಂತಸದ ಸ್ನಾನವೆ ಸರಿ, ನಿಸರ್ಗ ಸುಂದರಿಗೆ ವಸಗೆಯಿದು ಎನ್ನುತ್ತಾ, ಭೂಮಿತಾಯಿಗೆ ಸಂತೋಷದ ಜೀವಸೃಷ್ಟಿಯ ಪರ್ವದ ವರ್ಷಕಾಲವಿದು ಎಂದಿದ್ದಾರೆ. ಮಳೆಯಿಂದ ಹುಟ್ಟಿದಂತಹ ಹಸಿರಾದ ಹುಲ್ಲನ್ನು ಮೇಯಲಿಕ್ಕಾಗಿ ಹಸು, ಎಮ್ಮೆ, ಕುರಿಯಾದಿಯಾಗಿ ಎಲ್ಲಾ ಜೀವರಾಶಿಗಳು ಹೊರಡುತ್ತವೆ. ಮಳೆಯಿಂದ ಎಲ್ಲಾ ಪ್ರಾಣಿಗಳಿಗೂ ಆಹಾರ ದೊರೆಯುತ್ತದೆ. ಹೀಗೆ ಮಳೆಯಿಂದ ನೀರು ಮತ್ತು ಆಹಾರ ದೊರೆಯುತ್ತದೆ. ಒಟ್ಟಾರೆ ಪ್ರಕೃತಿಯ ಉಳಿವಿಗೆ ಮಳೆ ಕಾರಣವಾಗಿದೆ.

ಬೋರೇಗೌಡ ಚಿಕ್ಕಮರಳಿ ಅವರ 'ಭಿತ್ತರದ ಬಿಂದು' ಕವನಸಂಕಲನದ 'ಹೋಳಿಯ ಹುಣ್ಣಿಮೆ' ಕವನದಲ್ಲಿ ಮಳೆಯನ್ನು ಕುರಿತು ಹೀಗೆ ವರ್ಣಿಸಿದ್ದಾರೆ

“ಕಾಮಧೇನು ಕರೆದ ಪುರಾಣಕ್ಷೀರದ ಮಡು
ಜೊನ್ನಧಾರೆಯಾ ಸುರಿದು
ತಣಿಯುತಿಹುದೇನು ವಸುಂಧರೆಯ ಒಡಲು”[೯]

ಕಾಮಧೇನು ಕರೆದುದರ ಫಲವಾಗಿ ಭೂಮಿಗಿಳಿದ ಮಳೆಯು ಹಾಲಿನ ಮಡು ಎಂದಿದ್ದಾರೆ, ಇದು ಭೂಮಿಯಲ್ಲಿನ ಎಲ್ಲಾ ಜೀವಿಗಳ ಜೀವವನ್ನು ಉಳಿಸುತ್ತದೆ. ಜೊನ್ನ ಮಳೆಯಾಗಿ ಸುರಿದು ಭೂಮಿಯ ಒಡಲನ್ನು ತಣಿಸುತ್ತದೆ. ಹೀಗೆ ಭೂಮಿಯನ್ನು ತಣಿಸಲು ಮಳೆಯೇ ಬೇಕು ಎಂಬ ಭಾವವಿದೆ.

ಮಳೆಯನ್ನು ಕುರಿತು ಕನ್ನಡ ಕವಿಗಳು ಬಹಳ ಪ್ರೀತಿಯಿಂದ ವರ್ಣಿಸಿದ್ದಾರೆ. ಕಾರಣ ಮಳೆಯು ಎಲ್ಲಾ ಜೀವರಾಶಿಗಳ ಜೀವ ಉಳಿಸುವ ಜೀವ ಚೇತನವಾಗಿದೆ. ಮಳೆಯಿಂದ ಕೃಷಿ, ಕೃಷಿಯಿಂದ ಆಹಾರ, ಆಹಾರದಿಂದ ಜೀವ ಮತ್ತು ಜೀವನ ಹೀಗೆ ಮನುಷ್ಯನಿಗೂ ಆಹಾರವನ್ನು ಒದಗಿಸುವುದು ಮಳೆಯೆ. ಕವಿಗಳು ಮಳೆಯನ್ನು, ಮೋಡವನ್ನು, ಮಿಂಚನ್ನು, ಗಾಳಿಯನ್ನು ವರ್ಣಿಸಿದ್ದಾರೆ. ಮಳೆಯ ಭಾವ ಭಂಗಿ ವಿಲಾಸಗಳನ್ನು ಚಿತ್ರಿಸಿದ್ದಾರೆ. ಮಳೆಯ ಮೋಡ ಪ್ರಕೃತಿಗೆ ಮುಸುಕನ್ನು ಹೊಜ್ಜಿದಂತೆ, ಮಳೆ ಬರುವ ಸಂದರ್ಭದ ಗಾಳಿ ಭೂಮಿಯ ತಲೆಯನ್ನು ಬಾಚಿದಂತೆ, ಭೂಮಿಗೆ ಬೀಳುವ ಹನಿಗಳು ಬಾಣದಂತೆ, ಮಳೆಯ ಹನಿಗಳು ನರ್ತಿಸುವಂತೆ ಭೂಮಿಯ ಒಡಲನ್ನು ತಣಿಸುವಂತೆ ಮಳೆಯನ್ನು ಕುರಿತು ವರ್ಣಿಸಿದ್ದಾರೆ. ಮತ್ತು ಭೂಮಿಯ ಒಡಲನ್ನು ತಣಿಸಲು ಮಳೆಯೇ ಅವಷ್ಯಕ ಎಂದಿದ್ದಾರೆ. ಮಳೆಯನ್ನು ಕುರಿತ ವರ್ಣನೆ ಕನ್ನಡ ಕಾವ್ಯದಲ್ಲಿ ಭಿನ್ನ ಭಿನ್ನ ರೂಪ ಪಡೆದು ತನ್ನ ವಿಸ್ತಾರತೆಯನ್ನು ಹೆಚ್ಚಿಸಿಕೊಳ್ಳುತ್ತಾ ಸಾಗಿದೆ. ಮಳೆಯ ವರ್ಣನೆ ಕುರಿತ ಎಲ್ಲಾ ವಿವರಗಳನ್ನು ಇಲ್ಲಿ ಚರ್ಚಿಸಲು ಸಾಧ್ಯವಾಗಿಲ್ಲ. ಆಯ್ದ ಕೆಲವು ಮುಖ್ಯ ಅಂಶಗಳ ಹಿನ್ನೆಲೆಯಲ್ಲಿ ವಿವರಿಸಲಾಗಿದೆ. ಆಧುನಿಕ ಕನ್ನಡ ಕಾವ್ಯದಲ್ಲಿನ ಮಳೆಯ ವರ್ಣನೆ ಕುರಿತ ಮುಖ್ಯವೆನಿಸಿದ ಅಂಶಗಳನ್ನಷ್ಟೇ ಇಲ್ಲಿ ವಿವರಿಸಲಾಗಿದೆ.

**ಕೊನೆ ಟಿಪ್ಪಣಿಗಳು**

೧. ಸಖೀ ಗೀತ, ದ. ರಾ. ಬೇಂದ್ರೆ, ಪುಟ ಸಂಖ್ಯೆ-೬೫
೨. ಅದೇ ಪುಟ
೩. ಅದೇ ಪುಟ
೪. ಕುವೆಂಪು ಸಮಗ್ರ ಕಾವ್ಯ ಪುಟ ಸಂಖ್ಯೆ -೪೬೦
೫. ಅದೇ ಪುಟ
೬. ಎಪ್ಪತ್ತೆರಡು ಕವಿತೆಗಳು, ಪುಟ ಸಂಖ್ಯೆ -೫೨
೭. ಅವ್ಯಕ್ತ, ಅನ್ನಪೂರ್ಣ, ಪುಟ ಸಂಖ್ಯೆ-೧೯
೮. ಅದೇ ಪುಟ
೯. ಬಿತ್ತರದ ಬಿಂದು ಪುಟ ಸಂಖ್ಯೆ -೩೦

## ಅಧ್ಯಾಯ - ಹನ್ನೊಂದು
## ಸಮಾರೋಪ

ಮಳೆಯು ಭೂಮಿಯ ಮೇಲಿನ ಎಲ್ಲಾ ಜೀವರಾಶಿಗಳ ಜೀವಚೇತನವಾಗಿದೆ. ಮಳೆಯು ಜೀವರಾಶಿಗಳಿಗೆ ಜೀವ ಕಾರುಣ್ಯಕ್ಕೆ ಮತ್ತು ಜೀವನಕ್ಕೆ ಸ್ಫೂರ್ತಿಯಾಗಿದೆ. ಮಳೆ ಕೃಷಿಗೆ ಆಧಾರ ಸ್ಥಂಭವಾಗಿದೆ. ಮಳೆ ಮನುಷ್ಯನ ಜೀವನನ್ನು ಬಹಳವಾಗಿ ಪ್ರಭಾವಿಸಿದೆ. ಮಳೆಯು ಎಲ್ಲಾ ಜೀವಿಗಳ ಜೀವ ಉಳಿಸುವ ಮತ್ತು ಬೆಳೆಸುವ ಪ್ರೇರಕ ಶಕ್ತಿಯಾಗಿದೆ. ಈ ಸಂಪ್ರಬಂಧದಲ್ಲಿ ಮಳೆಯು ಮನುಷ್ಯನ ಜೀವನವನ್ನು ಪ್ರಭಾವಿಸಿದ ಪರಿಯನ್ನು ಮುಖ್ಯವಾಗಿ ಚರ್ಚಿಸಲಾಗಿದೆ. ಆಧುನಿಕ ಕನ್ನಡ ಕಾವ್ಯದಲ್ಲಿ ಮಳೆಯನ್ನು ಕುರಿತ ಕವನಗಳು ಸಾಕಷ್ಟು ರಚನೆಯಾಗಿವೆ. ಮಳೆ ಕುರಿತ ಕವನಗಳ ಅವಲೋಕನ ಮತ್ತು ಚರ್ಚೆ ವಿಸ್ತಾರವಾದ ವ್ಯಾಪ್ತಿಯನ್ನು ಹೊಂದಿದೆ. ಅವುಗಳ ವಿಶ್ಲೇಷಣೆ ಇನ್ನೂ ವಿಸ್ತಾರವಾಗುತ್ತದೆ. ಆಧುನಿಕ ಕನ್ನಡದಲ್ಲಿ ಕವನ ರಚಿಸಿರುವ ಬಹುತೇಕ ಕವಿಗಳು ಮಳೆಯನ್ನು ಕುರಿತು ಕವನಗಳನ್ನು ರಚಿಸಿದ್ದಾರೆ. ಮಳೆಯು ಕವಿಗಳನ್ನು ಇಷ್ಟೊಂದು ಪ್ರಭಾವಿಸಲು ಕಾರಣ ಮಳೆಯ ಶಕ್ತಿ ಮತ್ತು ವಸ್ತುವಿನ ವೈಶಾಲ್ಯತೆಯೇ ಆಗಿದೆ. ಮಳೆಯನ್ನು ಕವನಗಳಲ್ಲಿ ಹಿಡಿದಿಡುವ ಮತ್ತು ಅದರ ಸ್ವರೂಪವನ್ನು ಕಟ್ಟಿಕೊಡುವ ಪ್ರಯತ್ನವನ್ನು ಕನ್ನಡ ಕವಿಗಳು ಆರಂಭದಿಂದಲೂ ಮಾಡುತ್ತಿರುವುದು ವಿಶೇಷ.

ಈ ಸಂಪ್ರಬಂಧದಲ್ಲಿ ಮಳೆಯ ಪರಿಕಲ್ಪನೆ ಮತ್ತು ಸ್ವರೂಪವನ್ನು ಕವನಗಳ ವಿಶ್ಲೇಷಣೆಯೊಂದಿಗೆ ಕಟ್ಟಿಕೊಡುವ ಪ್ರಯತ್ನವನ್ನು ಮಾಡಲಾಗಿದೆ. ಪ್ರತಿಯೊಂದು ಅಧ್ಯಾಯದಲ್ಲಿಯೂ ಮಳೆಯ ಪರಿಕಲ್ಪನೆಯನ್ನು ಕಟ್ಟಿಕೊಡುವ ಮತ್ತು ಬೆಳೆಸುವ ವಿಸ್ತರಿಸುವ ಪ್ರಯತ್ನವನ್ನು ಕನ್ನಡ ಕವಿಗಳ ಕವನಗಳ ಹಿನ್ನೆಯಲ್ಲಿಮಾಡಿದ್ದೆನೆ. ಈ ನೆಲೆಯಲ್ಲಿ ಮಳೆ ಕುರಿತ ಕವನಗಳ ವಿಶ್ಲೇಷಣೆಯಲ್ಲಿ ಮುಖ್ಯವಾಗಿ ಪರಿಕಲ್ಪನೆಗಿಂತ ಕವನಗಳ ವಿಶ್ಲೇಷಣೆಗೆ ಹೆಚ್ಚಿನ ಒತ್ತನ್ನು ನೀಡಲಾಗಿದೆ. ಮಳೆಯು ಪ್ರಕೃತಿಯ ಕೊಡುಗೆಯಾದರೂ ಅದನ್ನು ದೈವೀಕರಣಗೊಳಿಸಿ ಸಂಸ್ಕೃತಿಯ ಪ್ರತೀಕವೆಂದು ಆರಾಧಿಸುತ್ತಾ ವಿವಿಧ ಆಚರಣೆಗಳನ್ನು ರೂಢಿಸಿಕೊಂಡಿದ್ದಾರೆ.

ಮಳೆಯು ಜನರ ಜೀವನವನ್ನು ಪ್ರಭಾವಿಸಿದೆ. ಅದು ರೈತರ ಬದುಕಿಗೆ ಆಧಾರವಾಗಿದೆ. ಮಳೆ ಬಂದರೆ ಭೂಮಿಯಲ್ಲಿ ಬೆಳೆ ಬೆಳೆದುಎಲ್ಲಾ ಜೀವಿಗಳು ಬದುಕು ಕಟ್ಟಿಕೊಳ್ಳಲು ಸಹಾಯಕವಾಗುತ್ತದೆ. ಮಳೆಯನ್ನು ಮತ್ತು ಅದರ ಪರಿಸರವನ್ನು ವಸ್ತುವಿಷಯವಾಗಿ ಒಂದು ರೀತಿಯಾಗಿ ಮತ್ತು ಮಳೆಯ ಸಾಂಸ್ಕೃತಿಕ ಆಯಾಮವನ್ನು ಇನ್ನೊಂದು ಮಗ್ಗಲಾಗಿ ಅಭ್ಯಸಿಸುವ ಮತ್ತು ಅರ್ಥೈಸುವ ಪ್ರಯತ್ನವನ್ನು ಮಾಡಲಾಗಿದೆ. ಈ ಸಂಪ್ರಬಂಧದಲ್ಲಿ ಮುಖ್ಯವಾಗಿ ಕವನಗಳ ಆಶಯದ ನೆಲೆಯಲ್ಲಿ ಅಧ್ಯಯನ ನಡೆಸಿ ವಿಶ್ಲೇಷಣೆ ಮಾಡುವ ಪ್ರಯತ್ನವನ್ನು ಮಾಡಿದ್ದೇನೆ. ಕವನಗಳ ಆಶಯಕ್ಕೆ ದಕ್ಕೆ ಬಾರದಂತೆಕವಿಯ ಆಶಯವನ್ನು ಸಾಕಾರಗೊಳಿಸುವ ನಿಟ್ಟಿನಲ್ಲಿ ಪ್ರಯತ್ನ ಮಾಡಲಾಗಿದೆ.

ಪ್ರತಿಯೊಂದು ಅಧ್ಯಾಯದಲ್ಲಿಯೂ ಮಳೆಯನ್ನು ಕುರಿತ ಆಶಯಗಳು ಮತ್ತು ಅವುಗಳ ಸಾಕಾರವನ್ನು ಕವನಗಳ ವಿಶ್ಲೇಷಣೆಯೊಂದಿಗೆ ವಿವರಿಸಲಾಗಿದೆ. ಅವುಗಳ ಮುಖ್ಯ ಅಂಶಗಳೆಂದರೆ ಪ್ರಕೃತಿಯ ಮೇಲಿನ ಮಳೆಯ ಪರಿಣಾಮವನ್ನು ಮುಖ್ಯ ಆಶಯವನ್ನಾಗಿಟ್ಟುಕೊಂಡು ಚರ್ಚಿಸಲಾಗಿದೆ. ಮಳೆಯು ಪ್ರಕೃತಿಯ ಕೊಡುಗೆಯಾಗಿದ್ದು ಪ್ರಕೃತಿಗೆ ಅವಶ್ಯಕವಾಗಿದೆ. ಪ್ರಕೃತಿಯ ಪುನರ್ ನಿರ್ಮಾಣಕ್ಕೆ ಮಳೆಯು ಪೂರಕವಾಗಿದ್ದು ಅವಶ್ಯಕವಾಗಿದೆ ಎಂಬುದನ್ನು ಚರ್ಚಿಸಲಾಗಿದೆ. ನಂತರ ಮಳೆಯು ಜನರ ಜೀವನವನ್ನು ಜೀವನ ಕಟ್ಟಿಕೊಳ್ಳಲು ಮತ್ತು ಕಟ್ಟಿಕೊಂಡ ಜೀವನವನ್ನು ಕೆಡವುತ್ತಿದೆ. ಹೀಗೆ ಪ್ರಭಾವಿಸಿದೆ. ಮಳೆಯನ್ನು ಜನರು ಹೇಗೆ ಸ್ವಾಗತ ಬಯಸಿದ್ದಾರೆ, ಅದಕ್ಕಾಗಿ ಹುಟ್ಟಿಕೊಂಡ ವಿಭಿನ್ನ ಆಚರಣೆಗಳೇನೆಂಬುದನ್ನು ತಿಳಿದು ಅದನ್ನು

ಕವಿಗಳು ಕವನಗಳಲ್ಲಿ ವರ್ಣಿಸಿರುವುದನ್ನು ಕುರಿತು ಚರ್ಚಿಸಲಾಗಿದೆ. ಮಳೆಯು ಸಂಬಂಧಗಳನ್ನು ಪ್ರಭಾವಿಸಿದ ಹಾಗೂ ಸಂಬಂಧಗಳನ್ನು ಬೆಸೆಯುತ್ತಿರುವುದನ್ನು ಕವನಗಳ ವಿಶ್ಲೇಷಣೆಯ ಜೊತೆಯಲ್ಲಿ ಚರ್ಚಿಸಲಾಗಿದೆ. ಮಳೆಯು ಬಡಜನರ ಮೇಲೆ ಬೀರಿದ ಪರಿಣಾಮಗಳನ್ನು ಕವಿತೆಗಳಲ್ಲಿ ಕವಿಗಳು ಕಟ್ಟಿಕೊಟ್ಟಿರುವ ಹಿನ್ನೆಲೆಯಲ್ಲಿ ಅದರ ಭೀಕರತೆಯ ನೆಲೆಯಲ್ಲಿ ಕವನಗಳನ್ನು ವಿಶ್ಲೇಷಣೆ ಮತ್ತು ಬಡತನದ ಪರಿಕಲ್ಪನೆಯನ್ನು ಅರ್ಥೈಸುವ ಪ್ರಯತ್ನ ಹಾಗು ಅದಕ್ಕೆ ಪರಿಹಾರ ಸೂಚಿಸುವ ಪ್ರಯತ್ನ ಮಾಡಲಾಗಿದೆ. ಅಲ್ಲದೇ ಮಳೆಬರುವಾಗಿನ ಸ್ಥಿತಿಯನ್ನು ಕವನಗಳ ನೆಲೆಯಲ್ಲಿ ಚಿತ್ರಿಸಲಾಗಿದೆ. ನಂತರ ಮಳೆಯ ಚಿತ್ರಣ ಮತ್ತು ಮಳೆಯ ವರ್ಣನೆಯನ್ನು ಕುರಿತು ವಿವರಿಸಲಾಗಿದೆ.

ಒಟ್ಟಾರೆಯಾಗಿ ಈ ಸಂಪ್ರಬಂಧದಲ್ಲಿ ಮಳೆಯನ್ನು ಕುರಿತು ಒಂದು ಹೊಸ ಪರಿಕಲ್ಪನೆಯು ಹುಟ್ಟುವಂತಹ ಹಾಗೂ ಆ ಪರಿಕಲ್ಪನೆಗೆ ಸ್ವರೂಪವನ್ನು ನೀಡುವಂತೆ ವಿಷಯವನ್ನು ವಿಸ್ತೃತವಾಗಿ ಚರ್ಚಿಸಲಾಗಿದೆ. ಮಳೆಯನ್ನು ಕನ್ನಡ ಕವಿಗಳನ್ನು ಪರಿಭಾವಿಸಿದ ರೀತಿ ಹಾಗೂ ಅದಕ್ಕೆ ಕೊಟ್ಟರೂಪವನ್ನು ವಿವರಿಸಿ ವಿಶ್ಲೇಷಿಸುವ ಮೂಲಕ ಮಳೆಯ ಪರಿಕಲ್ಪನೆಯನ್ನು ಕನ್ನಡ ಸಾಹಿತ್ಯಕ್ಕೆ ಕಟ್ಟಿಕೊಂಡಿದ್ದನ್ನು ಗುರುತಿಸಬಹುದಾಗಿದೆ. ನಾವು ಮುಖ್ಯವಾಗಿ ಮಳೆ ಕುರಿತ ಕವನಗಳ ಹಿನ್ನೆಲೆಯಲ್ಲಿ ಕವಿಗಳು ಅಭಿವ್ಯಕ್ತಪಡಿಸಿರುವ ಪರಿಸರದ ತತ್ವವನ್ನು ಶೋಧಿಸಿಕೊಳ್ಳಲು ಪ್ರಯತ್ನಿಸಲಾಗಿದೆ. ಪರಿಸರ ಮತ್ತು ಸ್ಥಳೀಯ ನೆಲೆಗಳಲ್ಲಿ ಮಳೆಯ ದೃಷ್ಟಿಯನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಕವಿಗಳು ಕವನಗಳಲ್ಲಿ ಮಳೆಯನ್ನು ಕೇಂದ್ರವಾಗಿಟ್ಟುಕೊಂಡು ಮನುಷ್ಯನ ಪ್ರಕೃತಿಯೊಂದಿಗಿನ ಅವಿನಾಭಾವ ಸಂಬಂಧದ ನೆಲೆಯನ್ನು ಕುರಿತು ಅಧ್ಯಯನ ಮಾಡಲಾಗಿದೆ. ಸ್ಥಳೀಯತೆ ಪ್ರಕೃತಿಯ ಸೌಂದರ್ಯ ಬದಲಾವಣೆ ಜೀವದ ಹುಟ್ಟು ವಿಕಾಸ ಮಳೆಯೊಂದಿಗಿನ ಜೀವನ ಸಂಘರ್ಷಗಳನ್ನು ಕುರಿತು ವಿಶ್ಲೇಷಿಸಲಾಗಿದೆ. ಈ ಅಧ್ಯಯನವು ಆಧುನಿಕ ಕನ್ನಡ ಕಾವ್ಯದಲ್ಲಿ ರಚನೆಗೊಂಡ ಮಳೆ ಕುರಿತ ಕವನಗಳನ್ನು ಕೇಂದ್ರವಾಗಿಸಿಕೊಂಡಿದೆ.

**********************************

## ಆಧಾರ ಗ್ರಂಥಗಳು


- ಅನಂತಮೂರ್ತಿ ಯು ಆರ್: ಬಾಹುಲಿ, ಸಹ್ಯಾದ್ರಿ ಪ್ರಕಾಶನ, ಮಂಗಳೂರು, ೧೯೬೨
- ಅನ್ನಪೂರ್ಣ: ಅವ್ಯಕ್ತ, ಮಲ್ಲೇಶ್ವರಿ ಪ್ರಕಾಶನ ಬೆಂಗಳೂರು, ೨೦೦೦
- ಆರತಿ ಎಚ್. ಎಸ್: ಓಕುಳಿ, ಸುಂದರ ಪ್ರಕಾಶನ, ಧಾರವಾಡ. ೧೯೮೭
- ಅನಂತಮೂರ್ತಿ ಯು ಆರ್: ಸಮಕ್ಷಮ, ಅನನ್ಯ ಪ್ರಕಾಶನ, ಮೈಸೂರು ೧೯೮೦
- ಆಮೂರ ಜಿ ಎಸ್: ಅರ್ಥಲೋಕ, ಸ್ನೇಹ ಪ್ರಕಾಶನ; ಬೆಂಗಳೂರು, ೧೯೮೦
- ಕುವೆಂಪು :ಸಮಗ್ರ ಕಾವ್ಯ, ಸಂಪುಟ ೧, ಪ್ರಸಾರಂಗ, ಕನ್ನಡ ವಿ. ವಿ. ಹಂಪಿ
- ಕಣವಿ: ಸಮಗ್ರ ಕಾವ್ಯ, ಸುಮುಖ ಪ್ರಕಾಶನ, ಬೆಂಗಳೂರು. ೨೦೦೫
- ಕೃಷ್ಣಮೂರ್ತಿ ಬೆಳಿಗೆರೆ: ಸಾವಿರದ ಕಣ್ಣು ನವಿಲು, ಅನ್ವೇಷಣೆ ಪ್ರಕಾಶನ, ಬೆಂಗಳುರು, ೧೯೯೬
- ಕೃಷ್ಣಮೂರ್ತಿ ಬೆಳಿಗೆರೆ: ಕಿಂಚಿತ್ತು ಪ್ರೀತಿಯ ಮಾತು, ಅನ್ವೇಷಣೆ ಪ್ರಕಾಶನ, ಬೆಂಗಳುರು, ೧೯೯೫
- ಗಂಗಾಧರಚಿತ್ತಾಲ :ಎಪ್ಪತ್ತೆರಡು ಕವಿತೆಗಳು, ಫ್ರಿ, ಸಮ್ ಬುಕ್ (ಲಿ), ಬೆಂಗಳೂರು. ೨೦೦೨
- ಗೋಕಾಕ್.ವಿ ಕೃ. : ನವೋದಯ ಕಾವ್ಯ ಭಾಗ ೨, ಅಂಕಿತ ಪ್ರಕಾಶನ, ಬೆಂಗಳೂರು, ೨೦೦೬
- ಚೆನ್ನಸ್ವಾಮಿ ಎಂ : ಜನನಿ, ಓಂ,ಸಾಹಿ ಸೆಲ್ಸ್ ಪ್ರಕಾಶನ, ಮೈಸೂರು, ೨೦೦೦
- ದಿನಕರದೆಸಾಯಿ : ಸಮಗ್ರ ಕಾವ್ಯ, ಕೆನರ ವೆಲ್‌ಫೆರ್ ಟ್ರಸ್ಟ್ ಆಂಕೊಲ, ೨೦೦೭
- ದೀಪ ಎಸ್. ಆರ್ :ದುಂಡು ಮಲ್ಲಿಗೆ, ದೀಪ ಪ್ರಕಾಶನ, ಬೆಂಗಳುರು, ೧೯೯೩
- ದೊಡ್ಡ ರಂಗೇಗೌಡ : ಎಂ.ವಿ. ಸೀತಾರಾಮಯ್ಯನವರ ಗೇಯ ಕವನಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೧೧
- ದೊಡ್ಡ ರಂಗೇಗೌಡ: ರಾಘವ ಅವರ ಗೇಯ ಕವನಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೧೧
- ನಿಸಾರ್ ಅಹಮದ್ ಕೆ. ಎಸ್. ಸಮಗ್ರ ಕವಿತೆಗಳು ಸಪ್ನಬುಕ್ ಹೌಸ್, ಬೆಂಗಳೂರು, ೧೯೯೧
- ನಾಗಭೂಷಣಸ್ವಾಮಿ. ಓ.ಎಲ್. ವಿಮರ್ಶೆಯ ಪರಿಭಾಷೆ, ಅಂಕಿತ ಪ್ರಕಾಶನ, ಬೆಂಗಳೂರು, ೧೯೯೮
- ಪು. ತಿ. ನ: ಅವರ ಸಮಗ್ರ ಕಾವ್ಯ. ಡಾ. ಪು.ತಿ.ನ. ಟ್ರಸ್ಟ್, ೨೦೦೦
- ಎಸ್. ಎಸ್. ಬಸುಪಟ್ಟದ, ರತ್ನದೀಪ, ರವಿ ಪ್ರಕಾಶನ, ಗುಳೇಗುಡ್ಡ, ೧೯೫೬
- ಭಾರತಿ ದೇವಿ : ನಿಲ್ಲಿಸಬೆಡ ಕಾಯುವುದನ್ನು, ಅಭಿನವ ಪ್ರಕಾಶನ, ಬೆಂಗಳುರು, ೨೦೦೬
- ಭಾರತಿ ಪಾಟೀಲ : ಅಕ್ಕ ಕೆಳವ್ವ, ನೆಲೆ ಪ್ರಕಾಶನ, ಸಿಂದಗಿ, ೧೯೯೪
- ಭಾಗ್ಯ: ಸುಳ್ಳಿನಾಚೆಯ ಸತ್ಯ, ನೆಲಮನೆ ಪ್ರಕಾಶನ, ಮೈಸೂರು, ೧೯೮೧
- ಲಕ್ಷ್ಮಿನಾರಾಯಣಭಟ್ಟ ಎನ್.ಎಸ್. :ಕನ್ನಡ ಸಾಹಿತ್ಯ ಚರಿತ್ರೆ ಅಂಕಿತ ಪ್ರಕಾಶನ, ಬೆಂಗಳೂರು, ೨೦೧೪
- ಲಕ್ಷ್ಮಿನಾರಾಯಣಭಟ್ಟ. ಎನ್.ಎಸ್. ಜನಪ್ರಿಯ ಭಾವಗೀತೆಗಳು, ವಸಂತ ಪ್ರಕಾಶನ, ಬೆಂಗಳೂರು, ೨೦೦೫
- ಲೀಲಾ ಕಲಕೋಟೆ : ಶ್ರಾವಣದ ಸೆರಗು, ಕಣ್ವ ಪ್ರಕಾಶನ, ಬೆಂಗಳೂರು, ೨೦೦೮

- ಲಕ್ಷ್ಮಣರಾವ್ ಬಿ.ಎಸ್. : ಕ್ಯಾಮರ ಕಣ್ಣು, ಸಿ.ವಿ.ಜಿ. ಪಬ್ಲಿಕೇಶನ್, ಬೆಂಗಳೂರು, ೨೦೦೪
- ರಾಮಚಂದ್ರಶರ್ಮ. ಬಿ.ಸಿ : ಸಮಗ್ರ ಕಾವ್ಯ ಸಪ್ನ ಬುಕ್‌ಹೌಸ್, ಬೆಂಗಳೂರು, ೨೦೦೧
- ದೊಡ್ಡರಂಗೇಗೌಡ :ಎಂ. ವಿ. ಸೀತಾರಾಮಯ್ಯನವರ ಗೇಯ ಕವನಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೧೧
- ವೆಂಕಟೇಶಮೂರ್ತಿ ಎಚ್.ಎಸ್. : ಸಮಗ್ರ ಕವಿತೆಗಳು, ಆನಂದ ಕಂದ ಗ್ರಂಥಮಾಲೆ ಮಲ್ಲಾಡಿಹಳ್ಳಿ. ೨೦೦೯
- ಶೇಷಗಿರಿರಾವ್ ಎಲ್.ಎಸ್. : ಹೊಸಗನ್ನಡ ಸಾಹಿತ್ಯ ಚರಿತ್ರೆ, ಅಂಕಿತ ಪ್ರಕಾಶನ ಬೆಂಗಳೂರು, ೨೦೧೦
- ಶಿವಪ್ರಕಾಶ ಎಚ್.ಎಸ್. : ಮಳೆಯ ಮಂಟಪ, ಸಪ್ನ ಬುಕ್‌ಹೌಸ್, ಬೆಂಗಳೂರು, ೨೦೦೯
- ಶಾಮರಾಯ. ತ.ಸು. : ಕನ್ನಡ ಸಾಹಿತ್ಯ ಚರಿತ್ರೆ, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ ಮೈಸೂರು, ೨೦೧೦
- ಪಿ. ಕೆ. : ಸಮಗ್ರ ಕಾವ್ಯ, ಸಂವಹನ ಪ್ರಕಾಶನ, ಬೆಂಗಳೂರು ೨೦೦೦.


*********************************

